# ಕೊಡಗು  ಸಂಗಾತಿ


ಮಾರ್ಚ್1 ರಿಂದ 31, 2002 | ಪಾಕ್ಷಿಕ ಪತ್ರಿಕೆ | (ಮಾಯಿ 17-30 - ಸುಗ್ಗಿ 1-17)

ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 5 ಸಂಚಿಕೆ : 23-24A ಪುಟಗಳು : 24 ಬೆಲೆ ರೂ. : 12-00




ಲೇಖನ : ಒಳಪುಟದಲ್ಲಿ.

ಕರ್ನಾಟಕ ರಾಜ್ಯದ ವಿಧಾನ ಸಭೆಯ ವಿರೋಧ ಪಕ್ಷದ ಉಪನಾಯಕ
ಶ್ರೀ ದೇವರಗುಂಡ ಬಿ. ಸದಾನಂದ ಗೌಡರು

# ಓದುಗರು ತಪ್ಪದೆ ಗಮನಿಸಿ !

## "ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆಯ ವಿಳಾಸ ಬದಲಾವಣೆ

## ಪ್ರಿಯಾ ಸಂಗಾತಿ ಓದುಗರಲ್ಲಿ ವಿನಂತಿ

ದಿನಾಂಕ 01-03-2002 ರಿಂದ ಸಂಗಾತಿ ಕಛೇರಿಯನ್ನು ಈಕೆಳಗಿನ ವಿಳಾಸಕ್ಕೆ ಬದಲಾಯಿಸಲಾಗಿದೆ.
ಪ್ರಿಯಾ ಓದುಗರು ಎಂದಿನಂತೆ ಸಹಕರಿಸಲು ಮರೆಯದಿರಿ

**ಸಂಗಾತಿ ಕಛೇರಿ : ☎ 0821 - 516771**

ಪಟ್ಟಡ ಶೀಲಾಮಣಿ, ಸಂಪಾದಕಿ
"ಕೊಡಗು ಸಂಗಾತಿ" ಪಾಕ್ಷಿಕ ಪತ್ರಿಕೆ
ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ, ಹಿನ್‌ಕಲ್ ಅಂಚೆ,
ಮೈಸೂರು - 570 017

(ಹಿನ್‌ಕಲ್ ಅಂಚೆ ಕಛೇರಿ ಎದುರು, ವಿಜಯನಗರ ಪೋಲಿಸ್ ಸ್ಟೇಷನ್ ಎದುರು
ವಿಜಯಾ ಚಿತ್ರ ಮಂದಿರದ ಹತ್ತಿರ)




***ಮುಖ್ಯ ವಿಷಯ :*** ಸಮಯ ಬೆಳಿಗ್ಗೆ 10-00 ಗಂಟೆಯಿಂದ ಸಂಜೆ 7-00 ಗಂಟೆಯತನಕ
ಭಾನುವಾರ ರಜಾ ದಿನ ಎಲ್ಲಾ ಪತ್ರ ವ್ಯವಹಾರಗಳು ಈ ಮೇಲಿನ ವಿಳಾಸದಲ್ಲಿ ಮಾಡುವುದು

**ಮನೆ : ☎ 0821 - 404290**

ಪಟ್ಟಡ ಶೀಲಾಮಣಿ,
# 12058, ಸಂಗಾತಿ ನಿಲಯ, ವಿಜಯನಗರ ನಾಲ್ಕನೇ ಹಂತ,
ಎರಡನೆ ಘಟಕ, ಹಿನ್‌ಕಲ್ ಅಂಚೆ, ಮೈಸೂರು - 570 017



*"ಕೊಡಗು ಸಂಗಾತಿ" ತನ್ನ ಐದನೆ ವರ್ಷವನ್ನು ಪೂರ್ಣಗೊಳ್ಳುವ ಈ ಸಂದರ್ಭದಲ್ಲಿ ಸಂಗಾತಿಯ ಸಮಸ್ತ ಹಿತೈಷಿಗಳಿಗೆ ಕೊಡಗು ಸಂಗಾತಿ ಬಳಗದ ನಮನಗಳು.*



# 2002, ಮಾರ್ಚ್ 1 ರಿಂದ 31ರ ತನಕ

ಒಳನೋಟ 


| ಕನ್ನಡ ವಿಭಾಗ | ಲೇಖಕರು | ಪುಟಗಳು |
|---|---|---|
| ಕೊಡಗು ಪ್ರತ್ಯೇಕತೆಯ ಸ್ವರವೀಗ ಕ್ಷೀಣಿಸಿದೆ! | - ಸಂಪಾದಕೀಯ | 02 |
| ಚಿನ್ನ ತುಪ್ಪ ದೇವರ ಉತ್ಸವ | - ಕುಯ್ಯಮುಡಿ ಸುನೀಲ್ | 02 |
| ಡಿ. ವಿ. ಸದಾನಂದಗೌಡರು, B.Sc., L.L.B. ಶಾಸಕರು, | - ಆಜಡ್ಕ ರಾಣಿ ಬಾಲಕೃಷ್ಣ | 03 |
| ಧರ್ಮ ಮತ್ತು ರಾಜಕೀಯ- ಚಿಂತನೆ | - ಸಂಗಾತಿ ಚಿಣ್ಣಪ್ಪ | 04 |
| ಸೋಮಪ್ಪನವರ ಜನ್ಮ ಶತಾಬ್ದಿ ಆಚರಣೆ | - ಮೂಲೆ ಮಜಲು ಗೀತಾ | 06 |
| "ಲಿಫ್ಟ್ ಪ್ಲೀಸ್" | - ಎಡಿಕೇರಿ ಸುದರ್ಶನ್ | 07 |
| ಮುಂಬರುವ ವಿಶ್ವಕಪ್‌ಗೆ ಆಡಲಿರುವ ಸೋಮವಾರಪೇಟೆಯ ಅರ್ಜುನ್ | - ಸಂಗಾತಿ | 08 |
| ಕಲ್ಯಾಟಂಡ ಗಣಪತಿಯವರಿಗೆ ರಾಜ್ಯ ಪತ್ರಿಕಾ ಅಕಾಡೆಮಿ ಪ್ರಶಸ್ತಿ | - ಸಂಗಾತಿ | 08 |
| ಕುಶಾಲನಗರ ಗೌಡಬಾಂಧವರ ಸಂತೋಷಕೂಟ 2002 | - ಆಜಡ್ಕ ರಾಣಿ ಬಾಲಕೃಷ್ಣ | 09 |
| ಪತ್ರಿಕೆ ವಿಭಾಗ : ವ್ಯಕ್ತಿ ಪರಿಚಯ | - ಹರಿಣಿ ಗೋಪಾಲ ಚೇತನ್ | 10 |
| ಬರೆಯಿರಿ ಸಂಗಾತಿಗೆ | - ಪಟ್ಟಡ ಪ್ರಭಾಕರ | 11 |
| ಬೇವರ್ಸಿ, | - ತೋಟಂಬೈಲು ಗಣಪತಿ | 11 |
| ಕೊಡಗಿನ "ವೀರ ಪುತ್ರ ಜನರಲ್ ತಿಮ್ಮಯ್ಯ"ನವರ 96 ಹುಟ್ಟುಹಬ್ಬ | - ಸಂಗಾತಿ | 15 |
| ಪತ್ರಿಕೆ ವಿಭಾಗ : ಪಳಮೆ | - ನಂಗಾರು ಅಪ್ಪಾಜಿ | 18 |
| **ಅರೆಭಾಷಿಕ ವಿಭಾಗ :** | | |
| ಪ್ರಯತ್ನ ಬೇಕ್ | - ಪಟ್ಟಡ ಪ್ರಭಾಕರ | 14 |
| ಮರಳಿ ಬಂದ ಸವಿ ನೆನಪ್‌ಗ | - ಯಾಳದಾಳ್ ಜಯಲಕ್ಷ್ಮಿ ಗಿರಿಯಪ್ಪ | 12 |
| ಗೌಡ ಸಂಸ್ಕೃತಿ : ಭಾಷೆ ಮೊದ್ಲು | - ಗುಡ್ಡೆಮನೆ ರಮೇಶ್, ಮಡಿಕೇರಿ | 17 |
| ಮೂಢನಂಬಿಕೆ | - ಡಿ. ಜೆ. ವನಜಾಕ್ಷಿ (ಗೀತಾ) | 18 |
| ಗೌಡ ಜನಾಂಗದಲ್ಲಿ ಬದಲಾಗುತ್ತಿರುವ ಮಹಿಳೆ ಮತ್ತು ಅವಳ ಸಮಸ್ಯೆಗಳು | - ಮೀನಾಕ್ಷಿ | 19 |



| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** ಮೈನ್ ರೋಡ್, ದೊಡ್ಡಣ್ಣ ಬಿಲ್ಡಿಂಗ್, ಅಂಚೆ ಕಛೇರಿ ಹತ್ತಿರ, ಹಿನಕಲ್ ಅಂಚೆ, ಮೈಸೂರು - 17. **ಫೋನ್ : 0821/516771 R: 404290** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ ಕೀ ಚೈನ್ ಲಭ್ಯ | **ಬೈತಡ್ಕ ಜಾನಕಿ ಬೆಳ್ಯಪ್ಪ,** ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
| | **ಚೆರಿಯಮನೆ ರಮೇಶ್,** C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, **ಫೋನ್ :** 08272/29620 |
| ವಿರಾಜಪೇಟೆ | **ಬಾರಿಕೆರ ಮನೋಜ್‌ಕುಮಾರ್,** ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ **ಫೋನ್ :** 08274/56591 |
| ಕುಶಾಲ ನಗರ | **ಕುಂಭಗೌಡನ ಸೋಮಣ್ಣ,** ಮಯೂರ ಕೋಲ್ಡ್ ಸ್ಟೋರೆಜ್, ಮುಖ್ಯ ರಸ್ತೆ, ಕುಶಾಲನಗರ - 571 234 **ಫೋನ್ :** 08276/73370 |
| ಬೆಂಗಳೂರು ಮಹಾನಗರ | **ಕಲ್ಲುಮುಟ್ಲು ಬಸಪ್ಪ,** ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು - 19, **ಫೋನ್ :** 080/6500946 |

ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **12** ರೂ.

ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ :

## ಕೊಡಗು ಪ್ರತ್ಯೇಕತೆಯ ಸ್ವರವೀಗ ಕ್ಷೀಣಿಸಿದೆ

ಕೊಡಗಿನಲ್ಲಿ ಪ್ರತ್ಯೇಕ ರಾಜ್ಯದ ಧ್ವನಿ ಆರಂಭಗೊಂಡು ಹತ್ತು ವರ್ಷಗಳು ಕಳೆಯಿತು ಅದರ ದಶಮಾನೋತ್ಸವದ ಅಂಗವಾಗಿ ನವೆಂಬರ್23ರಂದು ಮಡಿಕೇರಿಯ ಗಾಂಧೀ ಮೈದಾನದಲ್ಲಿ 'ಕೊಡವ ನ್ಯಾಷನಲ್‌ಡೇ' ಆಚರಿಸಲಾಯಿತು. ಹಾಗೆ ನೋಡಿದರೆ ಪ್ರತ್ಯೇಕತೆಯ ಹೋರಾಟ ಹಲವು ಮಜಲುಗಳನ್ನು ದಾಟಿ ಬಂದಿದೆ. ಈ ಹಾದಿಯಲ್ಲಿ ಅದು ವಿಶಾಲಗೊಳ್ಳುವ ಬದಲು ಸಂಕುಚಿತಗೊಂಡಿದ್ದೇ ಹೆಚ್ಚು. ದಿನ ಕಳೆದಂತೆ ಹೆಚ್ಚು ಜನರನ್ನು ಆಕರ್ಷಿಸುವ ಬದಲು ಇದ್ದ ಜನ ಬೆಂಬಲವನ್ನು ಕಳೆದುಕೊಂಡದ್ದೆ ಅದರ ಶ್ರೇಯಸ್ಸೆನ್ನಬಹುದು. ಪ್ರತ್ಯೇಕತೆಯ ಧ್ವನಿ **"ಕೊಡಗು ಲಿವಾಕ್"** ಆಗಿ ಮೊದಲು ಜನ್ಮ ತಳೆದಾಗ ಸಮಗ್ರ ಕೊಡಗಿನ ಚಿಂತೆ ಅದರೊಳಗಿತ್ತು. ಆಗ ಕೊಡಗಿನ ಎಲ್ಲಾ ಜನಾಂಗಗಳು ಅದರೊಂದಿಗಿದ್ದವೆನ್ನಬಹುದು. ನಂತರ**ಕೆ. ಆರ್. ಎಂ. ಎಎಂ.** ಆಗಿ ಪರಿವರ್ತನೆಗೊಂಡಾಗ 'ಕೇವಲ ಕೊಡವ ಭಾಷಿಗರಿಗೆ ಮಾತ್ರ 'ಕೊಡಗು' ಎಂಬ ಧ್ವನಿ ಮೊಳಗಿ ಗೌಡ ಜನಾಂಗ ಸೇರಿದಂತೆ ಕೆಲವು ಪ್ರಮುಖ ಜನಾಂಗಗಳು ಅದರಿಂದ ದೂರ ಸರಿಯುವಂತಾಯಿತು. ಈಗ **'ಕೊಡಗು ನ್ಯಾಷನಲ್ ಕೌನ್ಸಿಲ್'** ಹುಟ್ಟಿಕೊಂಡ ಮೇಲೆ ಅದೀಗ ಕೊಡವ ಜನಾಂಗಕ್ಕೆ ಮಾತ್ರ ಸೀಮಿತಗೊಂಡು, ನಾಚಪ್ಪನವರು ಕೊಡವ ಭಾಷೆ, ಸಂಸ್ಕೃತಿ, ಸಂಪ್ರದಾಯಗಳನ್ನು ಉಳಿಸಿಕೊಳ್ಳಲು ಪಣತೊಟ್ಟಿದ್ದಾರೆ. ಪ್ರಾಯಶಃ ಅವರವರ ಸಂಸ್ಕೃತಿ, ಸಂಪ್ರದಾಯಗಳನ್ನು ಉಳಿಸಿ ಬೆಳೆಸಿಕೊಳ್ಳುವುದು ಅವರವರ ಕರ್ತವ್ಯವೆನ್ನಬಹುದು.

ಕೊಡಗಿನ ಹೆಚ್ಚಿನ ಜನತೆಗೆ ಪ್ರತ್ಯೇಕ ರಾಜ್ಯದ ಬಗ್ಗೆ ಒಲವಿಲ್ಲ. ಆದರೆ ಕೊಡಗು ನಿರ್ಲಕ್ಷಿಸಲ್ಪಡುತ್ತಿದೆ ಎಂಬ ಕೊರಗು ಎಲ್ಲರಲ್ಲಿಯೂ ಮನೆಮಾಡಿಕೊಂಡಿದೆ ನಿಜ. ಕೊಡಗಿಗೆ ರಾಜ್ಯ ಸರ್ಕಾರ ಪ್ರತ್ಯೇಕ ಯೋಜನೆಯನ್ನು ರೂಪಿಸಬೇಕು. ಉತ್ತರ ಕರ್ನಾಟಕದ ಜಿಲ್ಲೆಗಳ ಅಭಿವೃದ್ಧಿಗಾಗಿ ವಿಶೇಷ ಯೋಜನೆಗಳನ್ನು ಕೈಗೊಂಡಿರುವಂತೆ ಅದನ್ನು ಕೊಡಗಿಗೂ ವಿಸ್ತರಿಸಬೇಕು.

ಕೊಡಗಿನಲ್ಲಿ ಖಾಲಿಯಿರುವ ಹುದ್ದೆಗಳಿಗೆ ಕೊಡಗಿನವರನ್ನೇ ನೇಮಿಸಿಕೊಳ್ಳುವಂತಾಗಬೇಕು. ಒಟ್ಟಿನಲ್ಲಿ ಕರ್ನಾಟಕದ ಕಣ್ಮಣಿ ಕೊಡಗು ಸರ್ವಾಂಗೀಣ ಅಭಿವೃದ್ಧಿ ಹೊಂದಬೇಕು. ವಾಟಾಳ್‌ನಾಗರಾಜ್‌ರವರು ಈ ಬಗ್ಗೆ ರಾಜ್ಯ ಸರ್ಕಾರವನ್ನು ಆಗ್ರಹಿಸಿದ್ದಾರೆ.

ರಾಜ್ಯ ಸರಕಾರ ತಕ್ಷಣ ಸ್ಪಂದಿಸದಿದ್ದರೆ ಕೊಡಗಿನ ಜನತೆ ತಮ್ಮೊಳಗಿನ ಭಿನ್ನತೆ ತೊರೆದು ನಾಡಿನ ಅಭಿವೃದ್ಧಿಗೆ ಹೋರಾಡಲು ಸಂಘಟಿತರಾಗುವುದು ಸಮಯೋಚಿತವಾಗಿದೆ. ವಿಶಾಲ ತಳಹದಿಯಲ್ಲಿ ಸಂಘಟಿತರಾದರೆ ಮಾತ್ರ ಕೊಡಗಿನ 'ಕಾವೇರಿ ಮಡಿಲು ಸುಖ ಸಂವೃದ್ಧಿಯಾಗಿ ಕಾವೇರಿ ನಾಡಿಗೆ ಕ್ಷೇಮವೆಂದು ಸಂಗಾತಿಯ ಚಿಂತನೆಯಾಗಿದೆ.

---

## ಚಿನ್ನ ತಪ್ಪ ದೇವರ ಉತ್ಸವ

ತಾವ್‌ನಾಡ್‌ನ ಸಣಪುಲಿಕೋಟು ಗ್ರಾಮದ ಚಿನ್ನತಪ್ಪ ದೇವರ ಉತ್ಸವವು ಇದೇ ಮಾರ್ಚ್ 5 ರಂದು ರಾತ್ರಿ 8 ಗಂಟೆಗೆ ಧಾರೆ ಪೂಜೆಯೊಂದಿಗೆ ಪ್ರಾರಂಭವಾಗುವುದು. ಮರುದಿನ "ಪಟನಿ" ಹಬ್ಬ ನಡೆಯಲಿದ್ದು ಆ ದಿನ ಶ್ರೀ ಕೃಷ್ಣನ ಕೊಳಲನ್ನು ಶುದ್ಧ ಭಕ್ತಿಯಿಂದ ವೀಕ್ಷಕರ ಕಣ್ಣಿಗೆ ಬೀಳದಂತೆ ವಸ್ತ್ರದಿಂದ ಮುಚ್ಚಿಟ್ಟುಕೊಂಡು "ಊರ್‌ಮಂದ್‌ಗೆ" ತರಲಾಗುವುದು. ಅದೇ ಸಮಯದಲ್ಲಿ ಎತ್ತು ಪೋರಾಟ ನಡೆಯಲಿದ್ದು ಅಂದು ರಾತ್ರಿ 7 ಗಂಟೆಗೆ ದೇವರ ಜಳಕದೊಂದಿಗೆ ಮುಕ್ತಾಯವಾಗಲಿದೆ. ಭಂಡಾರ ಹರಕೆ 7 ರಂದು ಸಲ್ಲಿಸಲಾಗುವುದು. ಭಕ್ತಾದಿಗಳು ಅಧಿಕ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಲಾಗಿದೆ.

**ವರದಿ : ಕುಯ್ಯಮುಡಿ ಸುನೀಲ್**

## ಶುಭ ವಿವಾಹ

a) ಅವಂದೂರು ಗ್ರಾಮದೇವಾಯಿರ ದೇವಯ್ಯನವರ ಮಗಳು ಲೀಲಾಕುಮಾರಿ (ಚಿಮ್ಮಿ)ಗೂ ಮತ್ತು ಮೇಕೇರಿ ಗ್ರಾಮದ ಆನೇರ ಈರಪ್ಪನವರ ಮಗ ಯಶೋಧರ(ಕಂದ) ನಿಗೂ ದಿನಾಂಕ 17-2-2002 ರಂದು ವಧುವಿನ ಸ್ವಗೃಹದಲ್ಲಿ ಹಳೇಪದ್ಧತಿ ಪ್ರಕಾರ ಚೆನ್ನಾಗಿ ನಡೆಯಿತು.

ರೀನಾ ಪಟ್ಟಡ.

b) ಬೆಂಗಳೂರು ನಿವಾಸಿ ಕುದುಪಜೆ ಈಶ್ವರನವರ ಪುತ್ರಿ ಶುಭಾಂಜಲಿ ಹಾಗೂ ಸುಳ್ಯ ಆಲೆಟ್ಟಿ ಗ್ರಾಮದ ಕುಂಜಿಲನ ಚಂಗಪ್ಪನವರ ಪುತ್ರ ಪ್ರವೀಣ್‌ನಿಗೂ ದಿನಾಂಕ 18-2-2002 ರಂದು ಬೆಂಗಳೂರಿನ ಯಲಹಂಕದಲ್ಲಿ ವಿಜೃಂಭಣೆಯಿಂದ ನಡೆಯಿತು.

- ಬಸಪ್ಪ ಕಲ್ಲುಮುಟ್ಟು

c) ಸುಳ್ಯದ ಅಡ್ಕಾರುವಿನ ಅಡ್ಡಂತಡ್ಕ ದೇರಣ್ಣಗೌಡರ ಮಗ ಶ್ಯಾಂಪ್ರಸಾದನಿಗೂ (ಇಂಜಿನಿಯರ್) ಮತ್ತು ಸುಳ್ಯದ ಸೂಂತೋಡು ಜನಾರ್ದನಗೌಡರ ಪುತ್ರಿ ಸೌಮ್ಯಳಿಗೂ ದಿನಾಂಕ 21-2-2002 ರಂದು ಸುಳ್ಯದ ಅಕ್ಷತಾ ಕಲಾಮಂದಿರದಲ್ಲಿ ಬಾರಿ ವಿಜೃಂಭಣೆಯಿಂದ ನಡೆಯಿತು.

- ಸಂಗಾತಿ.

d) ಅರ್ರುತ್ತೊಕ್ಲು ಗ್ರಾಮದ ತಳೂರು ಅಚ್ಚಯ್ಯನವರ ಮಗ ಕಿಶೋರ್‌ಕುಮಾರನಿಗೂ ಮತ್ತು ಪೆರಾಜೆ ಗ್ರಾಮದ ಅಮೆಚೂರು ಸುಬ್ಬಯ್ಯನವರ ಮಗಳು ಸ್ವರ್ಣಳಿಗೂ ದಿನಾಂಕ 24-2-2002 ರಂದು ಮಡಿಕೇರಿಯ ಕೆಳಗಿನ ಗೌಡ ಕಲ್ಯಾಣ ಮಂಟಪದಲ್ಲಿ ಬಾರಿ ವಿಜೃಭಣೆಯಿಂದ ನಡೆಯಿತು.

- ಸಂಗಾತಿ

## ಶ್ರೀ ಡಿ. ವಿ. ಸದಾನಂದ ಗೌಡ B.Sc., L.L.B., *ಶಾಸಕರು*

*ಪರಿಚಯ*: ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೋಕು, ಮಂಡೆಕೋಲು ಗ್ರಾಮದ ದೇವರ ಗುಂಡ ಮನೆತನದ ವೆಂಕಪ್ಪಗೌಡ ಮತ್ತು ಕಮಲ ದಂಪತಿಯರಿಗೆ ಆರು ಜನ ಮಕ್ಕಳಲ್ಲಿ ಮೂರನೇಯ ಪುತ್ರರಾಗಿ 18-3-1953 ರಲ್ಲಿ ಜನಿಸಿದರು. ಇವರಿಗೆ ಅಕ್ಕ, ಅಣ್ಣ, ತಂಗಿ ಹಾಗೂ ಎರಡು ಜನ ತಮ್ಮಂದಿರು, ಇವರ ಅಣ್ಣ ಶಿವರಾಮ್ ಡಿವಿಜನಲ್ ಕಮಿಷನರ್ ಆಗಿ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವರು. ಅಕ್ಕ ರತ್ನಾವತಿಯಳನ್ನು ಚೊಕ್ಕಾಡಿ ಮನೆತನಕ್ಕೆ ಹಾಗೂ ತಂಗಿಯನ್ನು ಹೊದ್ದೆಟಿ ಮನೆತನಕ್ಕೆ ವಿವಾಹ ಮಾಡಿಕೊಟ್ಟಿರುತ್ತಾರೆ. ತಮ್ಮ ಬಾಸ್ಕರ, ವಕೀಲ ವೃತ್ತಿಯನ್ನು ಸುಳ್ಯದಲ್ಲಿ ನಿರ್ವಹಿಸುತ್ತಿರುವರು. ಇನ್ನೊಬ್ಬ ತಮ್ಮ ಸುರೇಶ್ ಸ್ಟೇಶನ್ ಮಾಸ್ಟರ್ ಆಗಿ ಕೊಂಕಣ ರೈಲ್ವೆ ನಿಗಮ ಮೂಲ್ಕಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವರು.

ಸದಾನಂದ ಗೌಡರು 7-5-1981 ರಲ್ಲಿ ಕುಶಾಲನಗರದ ಗುಡ್ಡೆ ಹೊಸುರು ಗ್ರಾಮದ ಗುಡ್ಡೇರ ಮನೆ ಮಂದಣ್ಣ (ನಿವೃತ್ತ ಅರಣ್ಯಾಧಿಕಾರಿ) ಅವರ ಮಗಳು ಡಾಟಿಯನ್ನು ವಿವಾಹ ವಾದರು. ಈ ದಂಪತಿಗಳಿಗೆ ಎರಡು ಜನ ಗಂಡು ಮಕ್ಕಳು, ಒಬ್ಬ ಡಿ. ಎಸ್. ಕೌಶಿಕ್. ಇವನು ಎರಡನೇ ವರ್ಷದ M.B.B.S ಓದುತ್ತಿರುವನು. ಇನ್ನೊಬ್ಬ ಕಾರ್ತಿಕ್, ಇವನು 10 ನೇ ತರಗತಿಯಲ್ಲಿ ವಿವೇಕಾನಂದ ಅಂಗ್ಲ ಮಾಧ್ಯಮ ಶಾಲೆಯಲ್ಲಿ ಕಲಿಯುತ್ತಿರುವನು.

ಇವರನ್ನು ನೀವು ರಾಜಕೀಯಕ್ಕೆ ಸೇರಿದ ಉದ್ದೇಶ ಏನು? ಎಂದು ಪ್ರಶ್ನಿಸಿದಾಗ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಜನ ಸಾಮಾನ್ಯರ ಸಮಸ್ಯೆಗಳಿಗೆ ಸ್ಪಂದನ ಮಾಡಲು ಇರುವಂತಹ ದಾರಿಗಳಲ್ಲಿ ರಾಜಕಾರಣ ಅತ್ಯಂತ ಪರಿಣಾಮಕಾರಿ ವೇದಿಕೆ ಮತ್ತು ರಾಜಕಾರಣ ಕೆಲಸ ಕೆಟ್ಟವರ ಕೂಟವಾಗದಿರಲು ರಾಜಕಾರಣ ಪ್ರವೇಶ ಮಾಡಬೇಕಾಯಿತು. ಅಲ್ಲದೆ ಸುಳ್ಯದಲ್ಲಿ ವಕೀಲ ವೃತ್ತಿ ನಡೆಸುತ್ತಿದ್ದ ಸಂದರ್ಭದಲ್ಲಿ ಇತರ ಪಕ್ಷದ ರಾಜಕೀಯ ವ್ಯಕ್ತಿಗಳು ಜನರನ್ನು ಮರುಳುಗೊಳಿಸಿ, ಸುಳ್ಳು ಭರವಸೆಗಳನ್ನು ನೀಡಿ ಮೋಸಗೊಳಿಸುತ್ತಿದ್ದರು. ಜನರಿಗೆ ಅವಶ್ಯವಿರುವ ಕೆಲಸ ಕಾರ್ಯಗಳನ್ನು ಮಾಡಿಕೊಡಲು ಹಣ ಪಡೆದು ವಂಚಿಸುತ್ತಿದ್ದರು.

ಚುನಾವಣೆ ಸಂದರ್ಭದಲ್ಲಿ ಹಣ, ಹೆಂಡನೀಡಿ ಮತ ಪಡೆಯುತ್ತಿದ್ದರೇ ಹೊರತು ಇತರ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ನಡೆಸುವ ಕೆಲಸ ಮಾಡುತ್ತಿರಲಿಲ್ಲ. ಸರಕಾರದ ಕಾಮುಗಾರಿಗಳ ನಿರ್ವಹಣೆಯಲ್ಲಿ ಗುತ್ತಿಗೆದಾರರೊಂದಿಗೆ ಶಾಮಿಲಾಗಿ ಅವ್ಯವಹಾರ ನಡೆಸಿ ಕಳಪೆ ಕಾಮಗಾರಿ ನಡೆಸುವ ಮೂಲಕ ಜನರ ಹಣವನ್ನು ಪೋಲು ಮಾಡುತ್ತಿದ್ದರು. ಈ ಎಲ್ಲ ವಿಷಯಗಳನ್ನು ಮನಗಂಡು ಈ ವ್ಯವಸ್ಥೆಯನ್ನು ಸರಿಪಡಿಸುವ ದೃಷ್ಟಿಯಿಂದ ರಾಜಕೀಯ ಸೇರಬೇಕಾಯಿತು. ಈ ಪರಿಸ್ಥಿತಿಯೇ ನನ್ನನ್ನು ರಾಜಕೀಯಕ್ಕೆ ಎಳೆದು ತಂದಿತು ಎಂದರೆ ತಪ್ಪಲ್ಲ. ಹಿಂದಿನಿಂದಲೂ ನಾನು ಭಾರತೀಯ ಜನತಾ ಪಕ್ಷದ ಕಾರ್ಯಕರ್ತನಾಗಿದ್ದುದರಿಂದ ಈ ಕ್ಷೇತ್ರದಲ್ಲಿ ದುಡಿಯುವುದು ನನಗೆ ಅತ್ಯಂತ ಸುಲಭವಾಯಿತು ಎನ್ನುವ ಸ್ಪಷ್ಟನೆ.

ಬಡವರ ಏಳಿಗೆಗೆ ನಿಮ್ಮ ಸಹಕಾರ ಹಾಗೂ ಈ ವೃತ್ತಿಯಲ್ಲಿ ತೃಪ್ತಿ ಸಿಕ್ಕಿದೆಯಾ ಎಂದು ಪ್ರಶ್ನಿಸಿದಾಗ, ರಾಜಕೀಯ ಕ್ಷೇತ್ರವು ಬಡವರ ಹಾಗೂ ಜನಸಾಮಾನ್ಯರ ಸೇವೆ ಮಾಡಲು ಅತ್ಯಂತ ಸೂಕ್ತವಾದ ವೇದಿಕೆ. ಅದರಲ್ಲಿದ್ದು ಕೊಂಡು ಈ ಬಗ್ಗೆ ಬರುವ ಎಲ್ಲಾ ಅವಕಾಶಗಳನ್ನು ನಾನು ಮನಪೂರ್ವಕವಾಗಿ ನಿರ್ವಹಿಸಲು ಯತ್ನಿಸುತ್ತೇನೆ. ಬಡವರಿಗೆ ಸರಕಾರದಿಂದ ಸಿಗುವ ಸವಲತ್ತುಗಳ ಬಗ್ಗೆ ಮಾಹಿತಿ ನೀಡಿ, ಅದರ ಪ್ರಯೋಜನವನ್ನು ಅವರಿಗೆ ಒದಗಿಸಿಕೊಡುವುದು ಮತ್ತು ಅವರಿಗೆ ಅನ್ಯಾಯವಾದ ಸಂದರ್ಭದಲ್ಲಿ ಸಂಬಂಧಪಟ್ಟವರೊಡನೆ ವ್ಯವಹರಿಸಿ ಅವರ ಸಮಸ್ಯೆಯನ್ನು ಬಗೆಹರಿಸುವುದು ಮತ್ತು ನ್ಯಾಯ ಒದಗಿಸಿಕೊಡುವ ಪ್ರಯತ್ನ ಮಾಡುವುದು. ಇಂತಹ ಕಾರ್ಯಗಳಲ್ಲಿ ನನಗೆ ತುಂಬಾ ತೃಪ್ತಿ ಸಿಕ್ಕಿದೆ ಎಂದು ಹೇಳುತ್ತಾರೆ. ಸೋಲಿನ ದಿನಗಳಲ್ಲಿ ನಿಮ್ಮ ಅನಿಸಿಕೆಗಳು? "ಸೋಲೆ ಗೆಲುವಿನ ಸೋಪಾನ" ಎಂಬ ನಾಣ್ಣುಡಿಯಂತೆ ಕಾರ್ಯ ನಿರ್ವಹಿಸಿದ್ದೇನೆ. ಗೆದ್ದಾಗ ಹಿಗ್ಗಿಲ್ಲ, ಸೋತಾಗ ಕುಗ್ಗಿಲ್ಲ ನಿಮ್ಮ ಕಾರ್ಯಕ್ಷೇತ್ರದಲ್ಲಿ ಸಾರ್ವಜನಿಕರ ಸಹಕಾರ? ನನ್ನ ಕಾರ್ಯ ನಿರ್ವಹಣೆಯಲ್ಲಿ ಸಾರ್ವಜನಿಕರ ಸ್ಫೂರ್ತಿ ಸಹಕಾರ ನನಗೆ ಸಿಕ್ಕಿದೆ ಮತ್ತು ಅನೇಕರು ಸಾರ್ವಜನಿಕ ಸಮಸ್ಯೆಗಳನ್ನು ಗುರುತಿಸಿ, ಅವುಗಳ ಪರಿಹಾರಕ್ಕೆ ನನ್ನೊಡನೆ ಚರ್ಚಿಸಿ ಪರಿಹಾರ ಪಡೆದುಕೊಳ್ಳುತ್ತಿದ್ದಾರೆ. ಹಾಗೇನೇ ಯುವ ಪೀಳಿಗೆಗೆ ನಿಮ್ಮ ಸಲಹೆ, ಅಂದರೆ ಸಾಮಾಜಿಕ ಸಮಸ್ಯೆಗಳನ್ನು ಗುರುತಿಸಿ ಅವುಗಳಿಗೆ ಹೋರಾಡುವ ಮನೋಭಾವ ಬೆಳೆಸಿಕೊಳ್ಳಬೇಕು. ಹದಿ ಹರೆಯದ ಹುಡುಗ ಹುಡುಗಿಯರು ಪಾಶ್ಚಾತ್ಯಾ ಸಂಸ್ಕೃತಿಗೆ ಜೋತುಬೀಳುವುದರ ವಿರುದ್ಧ ಮನವರಿಕೆ ಮಾಡಿ, ಭಾರತೀಯ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುವಲ್ಲಿ ಅವರಿಗೆ ಮಾರ್ಗದರ್ಶನ ಮಾಡಬೇಕು. ಜನೋಪಯೋಗಿ ಕಾರ್ಯ ಕ್ರಮಗಳನ್ನು ನಡೆಸಿ ಸದಾ ಕ್ರಿಯಾಶೀಲರಾಗಬೇಕು ಎಂದು ಸಲಹೆ ನೀಡುತ್ತಾರೆ.

ನಿಮ್ಮ ಮುಂದಿನ ಯೋಜನೆಗಳು ಏನಾದರೂ ಇದೆಯೇ,? ಅಂದರೆ ರೈತರಿಗೆ ಬೇಕಾದಂತಹ ಎಲ್ಲಾ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಪ್ರಯತ್ನ? ಮಾರುಕಟ್ಟೆ ಸ್ಥಿರೀಕರಣಕ್ಕೆ ಪ್ರಯತ್ನ, ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಕ್ಕೆ ಹೆಚ್ಚಿನ ಒತ್ತು, ಗ್ರಾಮಂತರ ಪ್ರದೇಶಗಳಿಗೆ ಸಂಪರ್ಕ ವ್ಯವಸ್ಥೆ ಕಲ್ಪಿಸುವುದು, ಪುತ್ತೂರು ಕ್ರೀಡಾಂಗಣ ಕಾಮಗಾರಿ ಪೂರ್ತಿಗೊಳಿಸುವ ಪ್ರಯತ್ನ. ಇವು ನನ್ನ ಸಧ್ಯದ ಗುರಿ.

ನಿಮ್ಮ ಹವ್ಯಾಸಗಳಾವುವು? ಮುಖ್ಯವಾಗಿ ಯಕ್ಷಗಾನ, ಇಷ್ಟಪಡುವ ಆಟ ಟೇಬಲ್ ಟೆನ್ನಿಸ್. ಹೀಗೆ, ನಮ್ಮ ಗೌ

ಜನಾಂಗದಲ್ಲಿ ಆರು ಜನ ಶಾಸಕರಾಗಿದ್ದಾರೆ ಎಂದು ನನ್ನ ಗಣನೆಗೆ ಬಂದಿದೆ. ಶ್ರೀಯುತರ ಸಾರ್ವಜನಿಕ ಜೀವನದಲ್ಲಿ ಇವರ ಪಾತ್ರ ಮತ್ತು ನಿರ್ವಹಣೆ ತುಂಬಾ ಗಣನೀಯವಾದದ್ದು ಇವರಿಗೆ ರಾಜ್ಯ ಅಥವಾ ಕೇಂದ್ರದಲ್ಲಿ ಸಚಿವ ಸ್ಥಾನ ಸಿಕ್ಕಲಿ ಎಂದು ಆಶಿಸುತ್ತಾ ಗೌಡ ಜನಾಂಗದ ಕುಲದೇವರಾದ ಶ್ರೀ "ತಿರುಪತಿ ವೆಂಕಟರಮಣ" ಸ್ವಾಮಿ ನಿಮ್ಮ ಕುಟುಂಬಕ್ಕೆ ಆಯುಷ್ಯ, ಆರೋಗ್ಯ, ಸಂಪತ್ತು, ಕೊಟ್ಟು, ಕಾಪಾಡಲಿ ಎಂದು "ಕೊಡಗು ಸಂಗಾತಿ"ಯ ಪರವಾಗಿ ಶುಭ ಹಾರೈಸುತ್ತೇನೆ.

ಬರಹ : (ಆಜಡ್ಕ ರಾಣಿ ಬಾಲಕೃಷ್ಣ)
ಕುಶಾಲನಗರ,

# ಶ್ರೀ ಡಿ. ವಿ. ಸದಾನಂದ ಗೌಡರು

**ಗೌಡರ ಸಾರ್ವಜನಿಕ ಜೀವನದ ಕಿರು ಪರಿಚಯ :**

ಶ್ರೀ ಡಿ. ವಿ. ಸದಾನಂದಗೌಡರು ರಾಜ್ಯ ವಿಧಾನಸಭೆಗೆ ಪುತ್ತೂರು ಕ್ಷೇತ್ರದಿಂದ 1994 ರಲ್ಲಿ ಆಯ್ಕೆಯಾಗಿ ಕ್ಷೇತ್ರದ ಸಮಗ್ರ ಚಿಂತನೆಗಾಗಿ ಮತ್ತು ಅಭಿವೃದ್ಧಿಗಾಗಿ ತನ್ನ ಪೂರ್ತಿ ಸಮಯವನ್ನು ಮುಡಿಪಾಗಿಟ್ಟು ಜನತೆಯ ಪ್ರೀತಿ ವಿಶ್ವಾಸವನ್ನು ಗಳಿಸುವ ಮೂಲಕ ತೀರಾ ಪರಿಚಿತರಾಗಿರುತ್ತಾರೆ. ತನ್ನ ಯಶಸ್ವೀ ಕಾರ್ಯ ಚಟುವಟಿಕೆಗಳಿಂದ ಇಡೀ ಕರ್ನಾಟಕ ರಾಜ್ಯದಲ್ಲಿ ಗುರುತಿಸಲ್ಪಟ್ಟಿರುವ ಯಶಸ್ವೀ ಯುವ ಶಾಸಕರಾಗಿರುತ್ತಾರೆ.

ತನ್ನ ವಿದ್ಯಾರ್ಥಿ ಜೀವನದಿಂದಲೇ ಹೈಸ್ಕೂಲ್ ವಿದ್ಯಾರ್ಥಿ ನಾಯಕನಾಗಿ ಉಡುಪಿ ಕಾನೂನು ಕಾಲೇಜು ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ 1975 ರಲ್ಲಿ ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್‌ನ ದ. ಕ. ಜಿಲ್ಲಾ ಪ್ರಧಾನ ಕಾರ್ಯದರ್ಶಿಯಾಗಿ ಜವಾಬ್ದಾರಿಯನ್ನು ನಿರ್ವಹಿಸಿರುವರು. ಸಹಕಾರ, ಕಾರ್ಮಿಕ, ರಾಜಕೀಯ, ಧಾರ್ಮಿಕ ಕ್ಷೇತ್ರದಲ್ಲಿ ವಿವಿಧ ಜವಾಬ್ದಾರಿಯನ್ನು ನಿರ್ವಹಿಸಿ ಜನ ಸೇವೆಯಲ್ಲಿ ಸದಾ ನಿರತರಾಗಿದ್ದಾರೆ. ಸದಾನಂದಗೌಡರು ರಾಷ್ಟ್ರೀಯ ಸ್ವಯಂ ಸೇವಕ ಸಂಘದ ವಿಚಾರಗಳಿಂದ ಪ್ರೇರಿತರಾಗಿ ತನ್ನ ಪ್ರಾಮಾಣಿಕತೆ, ನೇರ ನಡೆನುಡಿಗಳಿಂದ ಸಮಾಜದ ಎಲ್ಲಾ ವರ್ಗದ ಜನರ ಪ್ರೀತಿ ಆದರಗಳಿಗೆ ಪಾತ್ರರಾಗಿರುತ್ತಾರೆ.

ಸದಾನಂದಗೌಡರು ಪುತ್ತೂರು ತಾಲ್ಲೂಕಿನ ಕೆಯ್ಯೂರಿನಲ್ಲಿ ತನ್ನ ಪ್ರಾಥಮಿಕ ಶಿಕ್ಷಣವನ್ನು ಆರಂಭಿಸಿ ಸುಳ್ಯ ಪುತ್ತೂರುಗಳಲ್ಲಿ ಶಿಕ್ಷಣ ಮುಂದುವರಿಸಿ ಉಡುಪಿಯಲ್ಲಿ ಕಾನೂನು ಪದವಿ ಪಡೆದು 1976 ರಲ್ಲಿ ಪುತ್ತೂರು ಮತ್ತು ಸುಳ್ಯದಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿರುತ್ತಾರೆ. ಕೆಲ ಕಾಲ ಸರಕಾರಿ ವಕೀಲರಾಗಿ (A.P.P) ಸೇವೆ ಸಲ್ಲಿಸಿರುವ ಇವರು ಜನ ಸೇವೆಗೆ ಸಮಾಜ ಸಂಘಟನೆಗೆ ಹೆಚ್ಚಿನ ಅವಕಾಶಕ್ಕಾಗಿ ತನ್ನನ್ನು ತೊಡಗಿಸಿಕೊಳ್ಳಲು ಸರಕಾರಿ ಉದ್ಯೋಗಕ್ಕೆ ರಾಜೀನಾಮೆಯನ್ನು ನೀಡಿ ಅಂದಿನಿಂದ ಇಂದಿನವರೆಗೂ ಈ ಕ್ಷೇತ್ರದಲ್ಲಿ ಅವಿರತ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ.

## ಸಹಕಾರಿ ರಂಗದಲ್ಲಿ ಸಕ್ರಿಯವಾಗಿ

ಶ್ರೀ ಡಿ. ವಿ. ಸದಾನಂದ ಗೌಡರು ದ. ಕ. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಉಪಾಧ್ಯಕ್ಷರಾಗಿ ದ. ಕ. ಕೃಷಿಕರ ಸಹಕಾರ ಮಾರಾಟ ಸಂಘ (S.K.A. C.M.S.) ಮಂಗಳೂರು ಇದರ ನಿರ್ದೇಶಕರಾಗಿ ಪ್ರತಿಷ್ಠಿತ ಸುಳ್ಯ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ, ದೇಶದ ಪ್ರತಿಷ್ಠಿತ ಸಂಸ್ಥೆಯಾದ ಕ್ಯಾಂಪ್ಕೋದ ನಿರ್ದೇಶಕರಾಗಿ, ಮಂಡೆಕೋಲು ಸೇವಾ ಸಹಕಾರಿ ಬ್ಯಾಂಕಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಎಲ್ಲಾ ಸ್ತರದ ಜನಾದರಣೆಗೆ ಪಾತ್ರರಾಗಿರುತ್ತಾರೆ.

## ಕಾರ್ಮಿಕ ರಂಗದಲ್ಲಿ ಸೇವೆ

ಪುತ್ತೂರು ವಿಭಾಗದ ಭಾರತೀಯ ಮಜ್ದೂರ್ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ, ಸುಳ್ಯ ತಾಲೋಕು ಆಟೋ ರಿಕ್ಷಾ ಚಾಲಕ ಮಾಲಿಕ ಸಂಘದ ಅಧ್ಯಕ್ಷರಾಗಿ, ಸುಳ್ಯ ಪಿರ್ಕಾ ಬೀಡಿ ಮಜ್ದೂರ್ ಸಂಘದ ಅಧ್ಯಕ್ಷರಾಗಿ, ಕರ್ನಾಟಕ ಇಂಡಸ್ಟ್ರೀಸ್ ಸ್ಟಾಪ್ ಯೂನಿಯನ್ನಿನ ಅಧ್ಯಕ್ಷರಾಗಿ ಶ್ರೀ ಡಿ. ವಿ. ಸದಾನಂದ ಗೌಡರು ಸಲ್ಲಿಸಿದ ಸೇವೆ, ಸಾಧಿಸಿದ ಕಾರ್ಯಕ್ಷಮತೆ ಅವಿಸ್ಮರಣೀಯವಾಗಿದೆ.

## ರಾಜಕೀಯ ಕ್ಷೇತ್ರದಲ್ಲಿ ಕಾರ್ಯಚಟುವಟಿಕೆ

ಭಾರತೀಯ ಜನಸಂಘದ ಸಾಮಾನ್ಯ ಕಾರ್ಯಕರ್ತನಾಗಿ ರಾಜಕೀಯ ಕ್ಷೇತ್ರ ಪ್ರವೇಶಿಸಿರುವ ಶ್ರೀ ಡಿ. ವಿ. ಸದಾನಂದ ಗೌಡರು ಭಾರತೀಯ ಜನತಾ ಪಾರ್ಟಿಯ ಸುಳ್ಯ ವಿಧಾನಸಭಾ ಕ್ಷೇತ್ರದ ಪ್ರಥಮ ಅಧ್ಯಕ್ಷರಾಗಿ, ಬಿ. ಜೆ. ಪಿ., ದ. ಕ. ಜಿಲ್ಲಾ ಯುವ ಮೋರ್ಚಾದ ಅಧ್ಯಕ್ಷರಾಗಿ ದ. ಕ. ಜಿಲ್ಲಾ ಬಿಜೆಪಿ ಕಾರ್ಯದರ್ಶಿಯಾಗಿ, ದ. ಕ. ಜಿಲ್ಲಾ ಬಿಜೆಪಿ ಉಪಾಧ್ಯಕ್ಷರಾಗಿ, ಬಿಜೆಪಿ ಯುವ ಮೋರ್ಚಾದ ರಾಜ್ಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿರುವ ಇವರು ಪುತ್ತೂರು ಕ್ಷೇತ್ರದಿಂದ ರಾಜ್ಯ ವಿಧಾನಸಭೆಗೆ ಸದಸ್ಯರಾಗಿ ಆಯ್ಕೆಯಾಗಿ ಈ ಕ್ಷೇತ್ರದಲ್ಲಿ ಮಾತ್ರವಲ್ಲ ಇಡೀ ಕರ್ನಾಟಕ ರಾಜ್ಯದಲ್ಲೇ ಚುರುಕಿನ, ಪ್ರತಿಭಾವಂತ, ಪ್ರಾಮಾಣಿಕ, ದಕ್ಷ ಶಾಸಕರೆಂದು ಗುರುತಿಸಲ್ಪಟ್ಟಿರುತ್ತಾರೆ.

## ಕರ್ನಾಟಕ ವಿಧಾನ ಸಭೆಯ ಸದಸ್ಯರಾಗಿ

ಶ್ರೀ ಡಿ. ವಿ. ಸದಾನಂದ ಗೌಡರು ಶಾಸಕರಾಗಿ ಆಯ್ಕೆಯಾದ ನಂತರ ತನ್ನ ಪೂರ್ತಿ ಸಮಯವನ್ನು ಈ ಕ್ಷೇತ್ರದ ಸಮಗ್ರ ಚಿಂತನೆಗಾಗಿ ಮತ್ತು ಅಭಿವೃದ್ಧಿಗಾಗಿ ಮುಡಿಪಾಗಿಟ್ಟು ಜನತೆಯ ಸೇವೆಯನ್ನು ಮಾಡಿ ಸರ್ವರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿರುತ್ತಾರೆ. ಶ್ರೀಯುತರು ಶಾಸಕರಾದ ನಂತರ ರಾಜ್ಯ ಭೂಬ್ಯಾಂಕಿನ ಸಿಬ್ಬಂದಿ ನೇಮಕಾತಿ (C.C.A) ಸಮಿತಿ ಸದಸ್ಯರಾಗಿ, ಒಂದು ವರ್ಷ ಕರ್ನಾಟಕ ಸರಕಾರದ ವಿದ್ಯುತ್ ಇಲಾಖೆಗೆ ಸಂಬಂಧಿಸಿದ ಇಂಧನ ಸಮಿತಿಯ ಸದಸ್ಯರಾಗಿ, ಒಂದು

ವರ್ಷಗಳ ಕಾಲ ಪ್ರತಿಷ್ಠಿತ ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಸದಸ್ಯರಾಗಿ ಎರಡು ವರ್ಷ ಸಾರ್ವಜನಿಕ ಉದ್ದಿಮೆ ಸಮಿತಿಯ ಸದಸ್ಯರಾಗಿ ಹಾಗೂ ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ತಡೆಯುವ ಕಾನೂನು ತಿದ್ದುಪಡಿ ಕರಡು ವಿಧೇಯಕ ತಯಾರಿಕಾ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿ, ವಿಧಾನಸಭಾ ಕಲಾಪಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಮೂಲಕ ತನ್ನ ಜವಾಬ್ದಾರಿಯನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರ್ವಹಿಸಿರುತ್ತಾರೆ. ಆಶ್ರಯ ಸಮಿತಿಯ ಅಧ್ಯಕ್ಷರಾಗಿ ಸೂರಿಲ್ಲದ ಬಡ ಜನತೆಗೆ ಸುಮಾರು 3.500 ಕ್ಕೂ ಅಧಿಕ ಮನೆಗಳ ವಿತರಣೆ ಮತ್ತು ಅಕ್ರಮ ಸಕ್ರಮ ಸಮಿತಿಯ ಅಧ್ಯಕ್ಷರಾಗಿ ಸುಮಾರು 17 ಸಾವಿರ ಕಡತಗಳನ್ನು ಯಾವುದೇ ಜಾತಿ ಮತ ಪಕ್ಷ ಪಂಗಡ ನೋಡದೆ ಕನಿಷ್ಠ ಎರಡೂವರೆ ವರ್ಷದ ಅವಧಿಯಲ್ಲಿ ಅರ್ಜಿದಾರರಿಗೆ ಮಂಜೂರು ಮಾಡಿರುವುದು ಇವರ ಕಾರ್ಯಶೈಲಿಗೆ ಸಾಕ್ಷಿಯಾಗಿರುತ್ತದೆ. ಅಲ್ಲದೆ ಬಿಜೆಪಿ ಆಡಳಿತವಿರುವ ಪುತ್ತೂರು ತಾಲ್ಲೋಕು ಪಂಚಾಯತಿ ಅಭಿವೃದ್ಧಿ ಕಾಮಗಾರಿಗಳಲ್ಲಿ ಕರ್ನಾಟಕದ 175 ತಾಲೂಕು ಪಂಚಾಯತುಗಳಲ್ಲಿ ಪ್ರಥಮ ಸ್ಥಾನಗಳಿಸಿರುವುದಕ್ಕೆ ಕಾರಣಕರ್ತರಾಗಿರುತ್ತಾರೆ.

## ಜನಪದ ಹೋರಾಟದ ಹಾದಿಯಲ್ಲಿ

ಹುಟ್ಟು ಹೋರಾಟಗಾರರಾದ ಶ್ರೀ ಡಿ. ವಿ. ಸದಾನಂದ ಗೌಡರು ಶಾಸಕರಾದ ನಂತರವು ಸರಕಾರದ ಮೇಲೆ ಒತ್ತಡ ತರುವಲ್ಲಿ ಮತ್ತು ಜನತೆಯ ಸಮಸ್ಯೆಗಳ ನಿವಾರಣೆಗೆ ಹೋರಾಟಗಳನ್ನು ಕೂಡ ಸಂಘಟಿಸಿರುತ್ತಾರೆ. ಎಂ. ಆರ್. ಪಿ. ಎಲ್‌ನವರು, ಮಂಗಳೂರಿನಿಂದ ಬೆಂಗಳೂರಿಗೆ ಪುತ್ತೂರು ಕ್ಷೇತ್ರದ ಮೂಲಕ ಸಾವಿರಾರು ಜನರ ಕೃಷಿಭೂಮಿಯಲ್ಲಿ ಪೈಪ್‌ಲೈನ್ ಮೂಲಕ ಅನಿಲ ಸಾಗಾಣಿಕೆ ಬಗ್ಗೆ ಕ್ರಮ ಕೈಗೊಳ್ಳುವಾಗ ಗುಂಡ್ಯದಿಂದ ಉಪ್ಪಿನಂಗಡಿ ತನಕ 50 ಕಿ. ಮೀ. ಕಾಲ್ನಡಿಗೆ ಜಾಥಾವನ್ನು ನಡೆಸುವ ಮೂಲಕ ವಿದ್ಯುತ್ ಕೃಷಿ ಪಂಪು ಸೆಟ್ಟುಗಳಿಗೆ ಮೀಟರ್ ಅಳವಡಿಕೆ ಪ್ರಸ್ತಾಪದ ವಿರುದ್ಧ ನಡೆಸಿದ ಹೋರಾಟಗಳು ಯಶಸ್ವಿಯಾಗಿರುವುದು ಜನಮನದಲ್ಲಿ ಇನ್ನೂ ಹಸಿರಾಗಿ ಇದೆ.

ನವೆಂಬರ್ 1999 ರ ಚುನಾವಣೆ ನಂತರ ರಚನೆಯಾದ ಹೊಸ ವಿಧಾನ ಸಭೆಯಲ್ಲಿ ವಿರೋಧ ಪಕ್ಷದ ಉಪನಾಯಕನ ಹುದ್ದೆಯನ್ನು ಪ್ರಕೃತ ಯಶಸ್ವಿಯಾಗಿ ನಿರ್ವಹಿಸುತ್ತಿದ್ದಾರೆ.

ಅಡಿಕೆ, ಮತ್ತಿತರ ಬೆಳೆಗಳಿಗೆ ಸರಿಯಾದ ಬೆಲೆ ಇಲ್ಲದೆ, ರೈತರು ಪರಿತಪಿಸುತ್ತಿರುವ ಸಂದರ್ಭದಲ್ಲಿ ಕೇಂದ್ರ ಸರಕಾರದ ಮೇಲೆ ಒತ್ತಡ ಹೇರಿ ದೇಶಕ್ಕೆ ಆಮದು ಆಗುತ್ತಿರುವ ಅಡಿಕೆ ಬೆಳೆಗೆ ಶೇಕಡಾ 100 ರಷ್ಟು ಆಮದು ಸುಂಕ ಹೇರುವಂತೆ ಮಾಡಿ, ಕೃಷಿಕರ ಬದುಕಿಗೆ ಮತ್ತೆ ಚೈತನ್ಯ ಮೂಡುವಂತೆ ಮಾಡಿರುತ್ತಾರೆ. ಹೀಗೆ ಸರಕಾರವನ್ನು ವಿಶ್ವಾಸಕ್ಕೆ ತೆಗೆದುಕೊಂಡು ಹಾಗೂ ಕೇಂದ್ರ ಸಚಿವ ಶ್ರೀ ಧನಂಜಯಕುಮಾರ್ ಅವರೊಂದಿಗೆ ಕೇಂದ್ರ ಕೃಷಿ ಸಚಿವರನ್ನು ನಿಯೋಗದ ಮೂಲಕ ಭೈಟಿ ಮಾಡುವಲ್ಲಿ ಶ್ರೀ ಡಿ. ವಿ. ಸದಾನಂದಗೌಡ ಅವರು ಮುತುವರ್ಜಿವಹಿಸಿದ್ದರು.

ರಾಜ್ಯ ಸರಕಾರ ನೇಮಿಸಿದ ಸಾರ್ವಜನಿಕ ಉದ್ಯಮ ಸಮಿತಿ ಮತ್ತು ಸಾರ್ವಜನಿಕ ಲೆಕ್ಕ ಪತ್ರ ಸಮಿತಿಯ ಸದಸ್ಯರಾಗಿ ಸಮಿತಿಯೊಂದಿಗೆ ರಾಜ್ಯದ ನಿರ್ದಿಷ್ಟ ಸಂಸ್ಥೆಗಳಿಗೆ ಭೇಟಿ ನೀಡಿ ಅವುಗಳ ಲೆಕ್ಕ ಪತ್ರದ ಸಮರ್ಪಕ ನಿರ್ವಹಣೆ ಬಗ್ಗೆ ತನಿಖೆ. ಅಡಿಕೆಗೆ ಬೆಂಬಲ ಬೆಲೆ ನಿಗದಿಪಡಿಸಲು, ಕೃಷಿಕರಿಗೆ ವಿದ್ಯುತ್ ನಿಗಮವು ವಿದ್ಯುತ್ ಕಡಿತ ರದ್ದುಪಡಿಸುವಂತೆ, ವಿದ್ಯುತ್‌ದರವನ್ನು ಇಳಿಸುವ ಬಗ್ಗೆ ಹಾಗೂ ತೆಂಗು ಬೆಳೆಗೆ ಬೆಂಬಲ ಬೆಲೆ ನಿಗದಿಪಡಿಸಲು ಸರಕಾರವನ್ನು ಒತ್ತಾಯಿಸುವ ಸಲುವಾಗಿ ದಶಂಬರ 2000 ದಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರೈತರ ಬೃಹತ್ ಜಾಥಾವನ್ನು ಸುಳ್ಯದಿಂದ ಮಂಗಳೂರಿಗೆ ಮೂರು ದಿನಗಳ ಕಾಲ ನಡೆದು ಜಾಥಾ ಹೋಗಿ ಮಂಗಳೂರಿನಲ್ಲಿ ಬೃಹತ್ ಸಮಾವೇಷ ಸಂಘಟಿಸಿದ್ದು, ಜಾಥಾದಲ್ಲಿ ಪ್ರತಿದಿನ ಕನಿಷ್ಠ 10,000 ಜನ ಕೃಷಿಕರು, ಭಾಗವಹಿಸಿದ್ದು, ಮಂಗಳೂರಿನಲ್ಲಿ ನಡೆದ ಸಮಾವೇಶದಲ್ಲಿ ಕನಿಷ್ಠ 25,000 ಜನ ಕೃಷಿಕರು ಭಾಗವಹಿಸಿದ್ದರು.

ಅಡಿಕೆಗೆ ಗೋವಾ ಮಾದರಿಯಲ್ಲಿ ಬೆಂಬಲ ಬೆಲೆ ನಿಗದಿಪಡಿಸುವಲ್ಲಿ ಕ್ಯಾಂಪ್ಕೊ ಸಂಸ್ಥೆಯ ಮೂಲಕ ಮಾರುಕಟ್ಟೆ ಮಧ್ಯಸ್ಥಿಕೆ ಯೋಜನೆಯನ್ನು (Market Intervention Scheme) ಅನುಷ್ಠಾನಗೊಳಿಸುವಂತೆ ಹಕ್ಕೊತ್ತಾಯ ಮಂಡಿಸಲಾಗಿದ್ದು, ಮುಖ್ಯಮಂತ್ರಿಗಳಿಂದ ಈ ವಿಚಾರದ ಕುರಿತು ಪರಿಶೀಲಿಸುವ ಭರವಸೆ ಪಡೆಯಲಾಗಿದೆ.

- ಸಂಗಾತಿ

---

## ಬಾಪೂಜಿಯವರ Nation

ಬಾಪೂಜಿ ಇದೋ ನಿನ್ನ Nation

ಹೆಚ್ಚುತ್ತಿದೆ ದೇಶದಲ್ಲಿ Papulation

ಆದರಿಂದ ಬಡವರಿಗೆ ತಿನ್ನೋಕಿಲ್ಲ Ration

ಆಗಬೇಕು ಭ್ರಷ್ಟ ಜನರಿಗೆ Objection

ಮಾಡೋಕೆ ಇವರಿಗೆ ಬರುತ್ತಿಲ್ಲ Adminisiration

ಆದ್ದರಿಂದ ಜನರನ್ನು ಮಾಡುತ್ತಾರೆ ಇವರು Destitation

ಇಂಥ ನಾಯಕರನ್ನು ಮಾಡಲೇಬೇಕು Contention (ಉಚ್ಚಾಟನೆ)

ಅಂದರೂ ಕೊನೆಗೆ ಮಾಡುತ್ತಾರೆ ದೇಶದ Exportation,

ರಚನೆ: ಸಂಗಾರು ರಾಜ, ಜೋಡುಪಾಲ

# ವಿಶಿಷ್ಟ ರೀತಿಯಲ್ಲಿ ಪ್ರಥಮ ಬಾರಿಗೆ ನಂಗಾರು ಮನೆತನದಿಂದ ದಿ। ಸೋಮಪ್ಪನವರ ಜನ್ಮ ಶತಾಬ್ಧಿ ಆಚರಣೆ.

ಪ್ರಪಂಚದ ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಅದು ಅತ್ಯಂತ ಪ್ರಾಚೀನವಾದ ಈಜಿಪ್ಟಿನ ನಾಗರೀಕತೆಯಾಗಿರಬಹುದು, ಮೆಸಪೊಟಮಿಯಾ, ಚೀನಾ ದೇಶಗಳ ಕಾಲದ ನಾಗರೀಕತೆಯಾಗಿರಬಹುದು. ಹಿರಿಯರ ಹಾಗೂ ತಂದೆ ತಾಯಂದಿರ ಆರಾಧನೆ ಸರ್ವಸಾಮಾನ್ಯವಾಗಿರಬಹುದು. ಭಾರತದ ಸಂಸ್ಕೃತಿಯಲ್ಲೂ ಅದು ಹಾಸು ಹೊಕ್ಕಾಗಿದ್ದು ಹಿರಿಯರು ಮತ್ತು ತಂದೆ ತಾಯಂದಿರು ಪ್ರತ್ಯೇಕವಾಗಿ ಕಾಣುವ ದೇವರುಗಳೆಂದು ನಂಬಲಾಗಿದೆ. ನವ ನಾಗರೀಕ ಸಮಾಜದಲ್ಲಿ ಎಲ್ಲವೂ ಯಾಂತ್ರಿಕವಾಗಿ ನಡೆಯುತ್ತಿರುವಾಗ ಕೊಡಗಿನ ಸೋಮವಾರಪೇಟೆಯಿಂದ ಸುಮಾರು 10 ಕಿ. ಮಿ. ದೂರ ಇರುವ ನಿಸರ್ಗದ ಮಡಿಲಲ್ಲಿರುವ ನಾಗವಾಲ ಗ್ರಾಮದಲ್ಲಿ ನಾನು ಕಂಡದ್ದು ನಂಗಾರು ಮನೆಯ ಹಿರಿಯರಿಗೆ ಗೌರವ ಸೂಚಿಸುವ ಒಂದು ಅಪರೂಪದ ಸಮಾರಂಭ.

ಈ ಸಮಾರಂಭವು ಭಾಗಮಂಡಲ ನಾಡಿನಲ್ಲಿ ಹುಟ್ಟಿ ನಾಗವಾಲ ಗ್ರಾಮಕ್ಕೆ 1940 ರ ದಶಕದಲ್ಲಿ ವಲಸೆ ಬಂದು ನೆಲೆಸಿ, ತನ್ನ ಪೂರ್ಣ ಬದುಕನ್ನು ಕಂಡ ದಿ।। ನಂಗಾರು ಅಪ್ಪಣ್ಣ ಸೋಮಪ್ಪನವರ ಜನ್ಮ ಶತಾಬ್ಧಿ ಹಾಗೂ ಅಷ್ಟೆ ಸಂಪೂರ್ಣ ಬದುಕನ್ನು ನಡೆಸಿದ ಅವರ ಮಗ ದಿ।। ನಂಗಾರು ಸೋಮಪ್ಪ ರಾಮಯ್ಯನವರ 75ನೇ ಹುಟ್ಟು ಹಬ್ಬದ ಸಮಾರಂಭ ನಿಸರ್ಗದ ಮಡಿಲಲ್ಲಿರುವ ನಾಗವಾಲ ಗ್ರಾಮಕ್ಕೆ ನಾನು ತಲುಪಿದ್ದು ಬೆಳಗಿನ ಜಾವ 10 ಘಂಟೆಗೆ ಆಗಲೇ ಊರಿನ ಮಧ್ಯದಲ್ಲಿ ಸುಂದರವಾದ ವೇದಿಕೆಯನ್ನು ನಿರ್ಮಿಸಲಾಗಿತ್ತು. ಗ್ರಾಮದವರು, ಮನೆಯವರು, ನೆಂಟರಿಷ್ಟರು, ಬಂದು ಸೇರಿದ್ದು ಸುಮಾರು 11 ಘಂಟೆಗೆ ಸಭೆ ಪ್ರಾರಂಭವಾದಾಗ ಈ ಸಮಾರಂಭದಲ್ಲಿ ಸುಮಾರು 300 ಜನ ನೆರೆದಿದ್ದರು. ಸೋಮಪ್ಪನವರ ನೆನಪಿಗಾಗಿ ಸುಂದರವಾದ ಗೋರಿಯನ್ನು ಕಟ್ಟಲಾಗಿದ್ದು, ಗೋರಿ ಪೂಜೆಯ ನಂತರ ವೇದಿಕೆ ಕಾರ್ಯಕ್ರಮವನ್ನು ಮೂಲೆ ಮಜಲು ಯಶೋಧ, ನಂಗಾರು ಸುಲೋಚನ ಮೋಹನ್ ಹಾಗೂ ಸವಿತ ನಿಂಗರಾಜುರವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಜ್ಯೋತಿ ಬೆಳಗಿಸುವ ಕಾರ್ಯಕ್ರಮವನ್ನು ನಡೆಸಿಕೊಟ್ಟವರು ಶ್ರೀಮತಿ ಸರಸ್ವತಿ ನಾಣಯ್ಯ ಹಾಗೂ ಶ್ರೀ ಕಾಳೇರಮ್ಮನ ನಾಣಯ್ಯ (ಶ್ರೀಮತಿಯವರು ಸೋಮಪ್ಪನವರ ಹತ್ತಿರದ ಸಂಬಂಧಿ) ಇವರು ನಡೆಸಿಕೊಟ್ಟರು. ಸುಸ್ವಾಗತವನ್ನು ಬಯಸಿದವರು ಸೋಮಪ್ಪನವರ ಮೊಮ್ಮಗ ಹಾಗೂ ರಾಮಯ್ಯನವರ ಹಿರಿಯ ಮಗ ನಂಗಾರು ನಾಣಯ್ಯನವರು. ಇವರು ಈ ಸಮಾರಂಭದ ಪ್ರಮುಖ ರೂವಾರಿಗಳಲ್ಲಿ ಒಬ್ಬರು, ಅನಂತರ ಸಭಿಕರೆಲ್ಲರೂ ಎದ್ದು ನಿಂತು ಒಂದು ನಿಮಿಷಗಳ ಮೌನಾಚರಣೆ ಮಾಡಿದರು. ಅನಂತರ ಶ್ರೀಮತಿ ಗೀತಾ ನಾಣಯ್ಯನವರು ನಂಗಾರು ಸೋಮಪ್ಪನವರ ವಂಶಾವಳಿಯ ಪರಿಚಯವನ್ನು ಮಾಡಿಕೊಟ್ಟರು, ಇದಾದ ನಂತರ ಹಿರಿಯರಿಗೆ ನೆಂಟರಿಸ್ಟರಿಗೆ ಶಾಲು ಹೊದಿಸಿ, ಸೋಮಪ್ಪ ಹಾಗೂ ರಾಮಯ್ಯನವರ ಜ್ಞಾಪಕಾರ್ಥ ಹೊರತರಲಾದ ಬೆಳ್ಳಿನಾಣ್ಯ ಹಾಗೂ ಸೋಮಪ್ಪನವರ ಭಾವಚಿತ್ರವನ್ನು ನೀಡಿ ಸನ್ಮಾನಿಸಲಾಯಿತು.

ಸನ್ಮಾನಿತ ಹಿರಿಯರೆಂದರೆ ಶ್ರೀ ಮತ್ತು ಶ್ರೀಮತಿ ಕಾಳೇರಮ್ಮನ ಸರಸ್ವತಿ ನಾಣಯ್ಯ, ನಂಗಾರು ಚೆನ್ನಪ್ಪ (ಎಡುಂಡೆ ಗ್ರಾಮ), ನಂಗಾರು ಬಾಬು, ನಂಗಾರು ಚಿನ್ನಪ್ಪ (ಕಾಜೂರು ಗ್ರಾಮ) ಶ್ರೀಮತಿ ಮಾಚಮ್ಮ ರಾಮಯ್ಯ, ಮೂಲೆ ಮಜಲು ಯಶೋಧ ಚಿನ್ನಪ್ಪ ಪಾಣತಲೆ ವಸಂತಿ ಪಳಂಗಪ್ಪ ಮುಖ್ಯ ಅತಿಥಿಗಳಾಗಿ ಬಂದಿದ್ದ ಕೊಡಗು ಸಂಗಾತಿಯ ಗೌರವ ಸಂಪಾದಕ ಪಟ್ಟಡ ಪ್ರಭಾಕರ, ಸೋಮಪ್ಪನವರ ಸೋದರ ಸಂಬಂಧಿಗಳಾದ ಪಟ್ಟಡ ಜಯರಾಮ ಮತ್ತು ಚಂದ್ರಮ್ಮ ಗುಡ್ಡಪ್ಪ, ಗುಡ್ಡೇರ ಐಯ್ಯಣ್ಣ, ನಂಗಾರು ಚಂಗಪ್ಪ, ನಂಗಾರು ಪೊನ್ನಪ್ಪ, ತೆಕ್ಕಡೆ ಬಸಪ್ಪ, ನಂಗಾರು ವಸಂತ್, ಶ್ರೀಮತಿ ನಂಗಾರು ಉತ್ತಪ್ಪ, ನಂಗಾರು ಗೋಪಾಲ, ನಂಗಾರು ಅಮ್ಮವ್ವ, ಶಾಂತನ ಕಮಲ, ಹೊಸೂರು ಪಾರ್ವತಿ ರಾಮಯ್ಯ ಮಂದ್ರಿರ ಗಣಪತಿ, ಕುಯ್ಯುಮುಡಿ ಪೊನ್ನಪ್ಪ, ಕುಂಭಗೌಡನ ಕುಶಾಲಪ್ಪ, ಉಡುದೋಳಿ ಪುಟ್ಟಪ್ಪನವರುಗಳು.

ಸಭಾ ಕಾರ್ಯಕ್ರಮದಂತೆ ಸಭಿಕರ ಭಾಷಣದಲ್ಲಿ ಮಾಜಿ ಸೇನಾನಿ ಗುಡ್ಡೇರ ನಂಜಪ್ಪನವರು ಮಾತನಾಡಿ ಹಿರಿಯರನ್ನು ನೆನೆಸಿಕೊಳ್ಳುವುದು ಕಿರಿಯರ ಪವಿತ್ರ ಕೆಲಸ ಎಂದರಲ್ಲದೆ ಒಂಭತ್ತನೇ ಶತಮಾನದಲ್ಲಿಯೇ ಶಿವಕೋಟಾಚಾರ್ಯನೆಂಬುವನು ವಡ್ಡಾರಾಧನೆ ಅಂದರೆ ಹಿರಿಯರ ಆರಾಧನೆ ಎಂದು ಅರ್ಥ ಬರುವ ಗ್ರಂಥವನ್ನೇ ಬರೆದಿದ್ದಾನೆ. ಹಾಗೆಯೇ ನಂಗಾರು ಮನೆಯವರು ಈ ಪವಿತ್ರ ಕೆಲಸವನ್ನು ಮಾಡುತ್ತಿರುವುದು ಶ್ಲಾಘನೀಯ ಹಾಗೂ ಅನುಕರಣೀಯ ಎಂದು ನುಡಿದರು.

ಅತಿಥಿಗಳಾಗಿ ಬಂದಿದ್ದ ನಿವೃತ್ತ ಡಿವೈಎಸ್‌ಪಿ ಕಾಳೇರಮ್ಮನ ನಾಣಯ್ಯನವರು ತಮ್ಮ ಭಾಷಣದಲ್ಲಿ ಹಿರಿಯರನ್ನು ನೆನೆಸಿಕೊಂಡರಲ್ಲದೆ ಗೌಡ ಜನಾಂಗದವರು ತಮ್ಮ ತಮ್ಮ ವಂಶಾವಳಿಯನ್ನು ಬರೆದು ಇತಿಹಾಸವನ್ನು ರಚನೆ ಮಾಡಬೇಕೆಂದು ಜನರಿಗೆ ಕರೆ ಕೊಟ್ಟರು. ಮೈಸೂರಿನಿಂದ ಆಗಮಿಸಿದ ಮುಖ್ಯ ಅತಿಥಿ ಕೊಡಗು ಸಂಗಾತಿಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರವರು ಸುಧೀರ್ಘ ಹಾಗೂ ಅರ್ಥಪೂರ್ಣವಾದ ಭಾಷಣ ಮಾಡಿ ಗೌಡರ ಇತಿಹಾಸವನ್ನು ಸಭಿಕರಿಗೆ ಮನಮುಟ್ಟುವಂತೆ ತಿಳಿಯಪಡಿಸಿದರು. ಸಭೆಯನ್ನು ಉದ್ದೇಶಿಸಿ ಮಾತಾಡಿದ ಹಿರಿಯರೆಂದರೆ ಶ್ರೀ ನಂಗಾರು ಬಾಬು ಸಣ್ಣಪ್ಪ, ಶ್ರೀ ಪಟ್ಟಡ ಜಯರಾಂರವರು, ಮಂಗಳೂರು ಜಿಲ್ಲಾ ಕಾರ್ಮಿಕ ಅಧಿಕಾರಿಯಾಗಿರುವ ಶ್ರೀಮಾನ್ ನಂಗಾರು ರಾಮಚಂದ್ರರವರು ಸಭೆಗೆ ಶುಭ ಹಾಗೂ ಯಶಸ್ಸನ್ನು ಕೋರಿ ಸಂದೇಶವನ್ನು ಕಳುಹಿಸಿದ್ದರು ಅದನ್ನು ಸಭೆಗೆ ಓದಿ ಹೇಳಲಾಯಿತು.

ಸುಳ್ಳಕೋಡಿ ಯಶೋಧ ತಮಯ್ಯನವರ ನೇತೃತ್ವದ ಸ್ಫೂರ್ತಿ ಯುವತಿ ಮಂಡಳಿಯವರು ಮನಮೋಹಕವಾದ ಶಕ್ತಿ ದೇವತೆಯ ಸೊಗಸಾದ ಮನರಂಜನೆ ನೃತ್ಯ ಕಾರ್ಯಕ್ರಮವನ್ನು ನೀಡಿದರು. ಈ ತಂಡದಲ್ಲಿ ಭಾಗವಹಿಸಿದ ಮಕ್ಕಳೆಂದರೆ ಉಷಾ, ಆಶಾ, ಪವಿತ್ರ, ಅನಿತಾ, ಶೃತಿ, ಯೋಗಿಣಿ, ಗೀತಾ, ನೀತಾ, ಜ್ಯೋತಿ, ಮತ್ತಿತರರು.

ವಂದನಾರ್ಪಣೆ ಹಾಗೂ ಕಾರ್ಯಕ್ರಮವನ್ನು ಸಾಂಗವಾಗಿ ಹಾಗೂ ಸುಂದರವಾಗಿ ನಿರೂಪಿಸಿ ನಡೆಸಿಕೊಟ್ಟವರು ಶ್ರೀಮಾನ್ ನಂಗಾರು ನಿಂಗರಾಜುರವರು ನಂತರ ರಾಷ್ಟ್ರಗೀತೆಯೊಂದಿಗೆ ಸಮಾರಂಭ ಮುಕ್ತಾಯವಾಯಿತು.

ಅನಂತರ ನೆರೆದಿದ್ದ ಜನರಿಗೆ ಭವ್ಯವಾದ ಭೋಜನಕೂಟ ಏರ್ಪಡಿಸಲಾಯಿತು. ಈ ಸುಂದರ ಸಮಾರಂಭದಲ್ಲಿ ಎಲೆಮರೆಕಾಯಿಯಂತೆ ಓಡಾಡಿ ರೂವಾರಿಗಳಾಗಿ ಕಾರ್ಯ ನಿರ್ವಹಿಸಿದ ವ್ಯಕ್ತಿಗಳೆಂದರೆ ನಂಗಾರು ಮಾಚಮ್ಮ, ನಂಗಾರು ಮೋಹನ್ , ನಂಗಾರು ಚಂಗಪ್ಪ, ಮತ್ತು ಕುಟುಂಬಸ್ಥರು, ಪೊನ್ನಪ್ಪ, ಮೋದನ ಪ್ರಿಯ, ಗುಡ್ಡೇರ ನಂಜಪ್ಪ, ತೆಕ್ಕಡೆ ಬಸಪ್ಪ, ಹೊಸೊಕ್ಲು, ರವಿ, ಹಾಲುಬಾಡಿ ರವಿ, ರಾಮ, ಸಿದ್ದಪ್ಪ ಮತ್ತು ಹರೀಶ, ಈ ಕಾರ್ಯಕ್ರಮದ ಪ್ರಧಾನ ನಿರ್ವಾಹಕರೆಂದರೆ ಶ್ರೀಮಾನ್ ನಂಗಾರು ನಾಣಯ್ಯನವರು.

ಬರಹ : ಮೂಲೆಮಜಲು ಗೀತಾ ಚಿನ್ನಪ್ಪ,
ಬೆಂಗಳೂರು

---

## "ಲಿಫ್ಟ್ ಪ್ಲೀಸ್" - ಸಣ್ಣ ಕಥೆ

"ಟ್ರಿಂ, ಟ್ರಿಂ, ಟ್ರಿಂ" ಟೆಲಿಫೋನ್ ಕರೆಗಂಟೆ ಸದ್ದು ಕೇಳಿಸಿದಂತೆ ಬಾಸವಾಗಿ ಸರಕ್ಕನೆ ತಿರುಗಿದೆ. ಉಹುಂ.... ಟೆಲಿಫೋನ್ ಸದ್ದೇ ಮಾಡಿರಲಿಲ್ಲ! ಅರ್ಧ ಗಂಟೆಯಿಂದ ಕನ್ನಡಿ ಮುಂದೆ ನಿಂತು ತುಟಿ ಸವರಿಕೊಂಡಿದ್ದಾಗಿತ್ತು. ಮತ್ತೊಮ್ಮೆ ಇನ್‌ಶರ್ಟ್ ಸರಿ ಮಾಡಿಕೊಂಡೆ, ಎರಡುಬಾರಿ perfume Spray ಮಾಡಿಕೊಂಡು ಮೂರು ಬಾರಿ ತಲೆ ಬಾಚಿಯಾಗಿತ್ತು. ನಾಲ್ಕನೇ ಬಾರಿ 'ಫೋನ್ ಗಂಟೆ ಬಾರಿಸಲಿ' ಎಂದು ಬೇಡಿಕೊಂಡೆ. ಅದು ಬಾರಿಸಲಿಲ್ಲ.

ಮತ್ತೊಮ್ಮೆ ಕೈಗಡಿಯಾರ ನೋಡಿಕೊಂಡು ಫೋನನ್ನು ದುರುಗುಟ್ಟಿ ನೋಡತೊಡಗಿದೆ. ಅದನ್ನೆತ್ತಿ ಕುಕ್ಕಿಬಿಡಬೇಕೆನ್ನುವಷ್ಟರಲ್ಲಿ ಗಂಟೆ ಬಾರಿಸಿತು. ಮನೆಯಲ್ಲಿದ್ದ ಬೇರೆಯವರ ಗಮನಕ್ಕೆ ಬರುವ ಮುಂಚೆ ಛಂಗನೆ ಹಾರಿ ಗಭಕ್ಕನೆ ರಿಸೀವರ್ ಕೈಗೆತ್ತಿಕೊಂಡು 'ಹಲೋ' ಎಂದು ಉಸುರಿದೆ.

"ಶ್ಯಾಂ?" ಕೇಳಿತು ಹೆಣ್ಣುದನಿ.

"ಹೌದು! ಎಲ್ಲಿಗೆ?"

"ಇನ್ನು 15 ನಿಮಿಷದಲ್ಲಿ Rex ಗೆ ಬಾ" ಎಂದವಳೆ ಫೋನ್ ಇಟ್ಟುಬಿಟ್ಟಳು . ಏನ್ನನ್ನೋ ಹೇಳಲು ಬಾಯಿ ತೆಗೆದಿದ್ದೆ, ನಿಧಾನವಾಗಿ ರಿಸೀವರ್ ಕೆಳಗಿಟ್ಟೆ.

ಆಹಾ... ನನ್ನ ರಕ್ತ ಚಲನೆ ಜಾಸ್ತಿಯಾದಂತೆ ಅನಿಸಿತು. ಕೊನೆಗೂ ಅವಳಿಂದ ಕರೆ ಬಂದಿತು. ಈ ಸಂಜೆ ಅವಳೊಂದಿಗೆ ಕಳೆಯಬಹುದು. ಅವಳು ಕರೆ ಕೊಟ್ಟಿದ್ದಕ್ಕೆ ನನಗೆಷ್ಟು ಸಂತೋಷವಾಗಿತ್ತು. ಅದನ್ನು ಅವಳಿಗೆ ಹೇಳುವಷ್ಟರಲ್ಲಿ ಆಕೆ ಫೋನ್ ಕೆಳಗಿಟ್ಟು ಬಿಟ್ಟಿದ್ದಳು.

ತಟ್ಟೆಯಲ್ಲಿದ್ದ ಊಟವನ್ನು ಕೇವಲ 60 ಸೆಕೆಂಡುಗಳಲ್ಲಿ ಮುಗಿಸಿ ರೆಕಾರ್ಡ್ ಮುರಿದೆ. 10 ನಿಮಿಷದಲ್ಲಿ ಬ್ರಿಗೇಡ್ ರೋಡ್ ಮುಟ್ಟಬೇಕೆಂದು ಪಣ ತೊಟ್ಟು, ಬೈಕ್‌ನ ಮೇಲೆ ಹಾರಿ ರಭಸದಿಂದ ಟ್ರಾಫಿಕ್‌ನೊಳಕ್ಕೆ ಧುಮುಕಿದೆ. ನಿಮಿಷಕ್ಕೆ 20 ಬಾರಿ ಬ್ರೇಕ್ ಒತ್ತುತ್ತಾ, ಸಂದಿಗೊಂದಿಗಳಲ್ಲಿ ನುಗ್ಗಿಸುತ್ತಾ, ನನಗೆ ತಿಳಿದಿದ್ದ ಎಲ್ಲಾ ಟ್ರಾಫಿಕ್ ರೂಲ್ಸ್‌ಗಳನ್ನು ಮುರಿಯುತ್ತಾ ವೇಗವಾಗಿ ಓಡಿಸುತ್ತಾ ಯೋಚಿಸಿದೆ - "ಇವಳನ್ನು ಸಂದಿಸೋಕೆ ಹೊರಟಾಗಲೆಲ್ಲಾ ನನಗ್ಯಾಕಿಷ್ಟು ಉದ್ವೇಗ?" ಪ್ರೀತಿಯ ಶಕ್ತಿ ಅಂತಹದು. ಸಾಮಾನ್ಯನನ್ನು ಅಸಾಮಾನ್ಯನಾಗಿಸುವ ಶಕ್ತಿ ಪ್ರೀತಿಗಿದೆ. ಹಾಗೆಯೇ ಪ್ರೀತಿ ಪರವಶವಾಗಿ ವಿವೇಚನಾಶಕ್ತಿಯನ್ನೂ ಕಳೆದುಕೊಳ್ಳುವ ಸಾಧ್ಯತೆಯೂ ಇದೆ. ದೂರದಲ್ಲಿ ಮಿನುಗುತ್ತಿದ್ದ ಹಸಿರು ದೀಪ ಹಳದಿಯಾಯಿತು. ನನ್ನ ಯೋಚನಾ ಲಹರಿ ಮುರಿಯಿತು. ಹಳದಿ ಕೆಂಪಾಗುವ ಮುನ್ನ ದಾಟಿ ಬಿಡುವ ತವಕದಿಂದ ವೇಗ ಹೆಚ್ಚಿಸಿದೆ. ಅನತಿ ದೂರದಲ್ಲಿ ಹಲವು ಚಾಲಕರು ಆಗಲೆ ತಮ್ಮ ವಾಹನಗಳನ್ನು ಅಡ್ಡಾದಿಡ್ಡಿಯಾಗಿ ನಿಲ್ಲಿಸಲಾಗಿತ್ತು. ಅವರಿಗೆ ಮನಸ್ಸಿನಲ್ಲೇ ಶಾಪ ಹಾಕುತ್ತಾ ಗಾಡಿ ನಿಲ್ಲಿಸಿದೆ. ಕೆಂಪು ಲೈಟ್ ಹಸಿರಾಗಲು ಯುಗಗಳನ್ನೇ ತೆಗೆದುಕೊಳ್ಳುತ್ತಿದೆ ಎಂದೆನಿಸಿತು. ನಾವು ಭೇಟಿಯಾಗುವುದೇ ಅಪರೂಪವಾದ್ದರಿಂದ, ಆಕೆಯೊಡನೆ ಕಳೆಯುವ ಪ್ರತಿಯೊಂದು ನಿಮಿಷವೂ ನನಗೆ ಅಮೂಲ್ಯವಾಗಿತ್ತು. ಸುತ್ತಲಿದ್ದ ಸೋಮಾರಿ ಚಾಲಕರಿಗೆ ಇದು ಹೇಗೆ ತಿಳಿಯಬೇಕು.?

ಹಸಿರು ಲೈಟ್ ಹತ್ತಲು ಹಲವು ಸೆಕೆಂಡ್‌ಗಳ ಅಂತರವಷ್ಟೇ ಇದ್ದಿತು. ಒಬ್ಬ ಮುದುಕ ಕುಂಟುತ್ತಾ ಬಳಿ ಬಂದ. ನನ್ನ ಗಾಡಿಯ ಗೇರ್ ಬದಲಾಯಿಸುವಷ್ಟರಲ್ಲಿ ಆತ "ಅಲ್ಲೀವರೆಗೆ ಬಿಡ್ತೀಯಾಣ್ಣ?" ಎಂದು ದೈನ್ಯತೆಯಿಂದ ಬೇಡಿದ. ತಕ್ಷಣ ಲೈಟ್ ಹಸಿರಾಗಿತ್ತು, ನಾನು ಆ ಮುದಿಯನನ್ನು ಕಡೆಗಣಿಸಿ ರಭಸದಿಂದ ಮುನ್ನುಗ್ಗಿದೆ. ತಕ್ಷಣ ನನ್ನ ಮನಸ್ಸು ಚುರುಕ್ಕೆಂದಿತು, ಹಿಂದಿರುಗಿ ನೋಡಿದೆ. ಕುಂಟ ಮುದುಕ ರಸ್ತೆ ಬದಿಯಲ್ಲಿ ತಲೆ ತಗ್ಗಿಸಿಕೊಂಡು ಅಸಹಾಯಕನಾಗಿ ನಿಂತಿದ್ದ. "ನಂದೇನೂ ತಪ್ಪಿಲ್ಲ" ಎಂದು ಮನಸ್ಸಿನಲ್ಲೇ ಸಮಾಧಾನ ಪಟ್ಟುಕೊಂಡು ಮುಂದೆ ನನಗಾಗಿ ಕಾದಿರುವ ಸಂತೋಷದ ಸಮಯವನ್ನು ಮೆಲುಕು ಹಾಕುತ್ತಾ ಬ್ರಿಗೇಡ್ ರಸ್ತೆಯ ಕಡೆ ಚಲಿಸಿದೆ.

ಸ್ವಲ್ಪ ಒದ್ದಾಟದ ನಂತರ ಗಾಡಿಯನ್ನು ಪಾರ್ಕಿಂಗ್ ಮಾಡಲು ಜಾಗ ದೊರೆಯಿತು. ದಾಪುಗಾಲು ಹಾಕುತ್ತಾ ರೆಕ್ಸ್ ಥಿಯೇಟರ್ ಬಳಿ ಬಂದೆ. ಆಕೆ ಬಾಗಿಲ ಬಳಿ ಟಿಕೇಟ್‌ಗಳನ್ನು ಕೈಯಲ್ಲಿ ಹಿಡಿದು ನನಗಾಗಿ ಕಾಯುತ್ತಾ ನಿಂತಿದ್ದಳು. ಸಿನಿಮಾ

9ನೇ ಪುಟಕ್ಕೆ

## ಮುಂಬರುವ ವಿಶ್ವ ಕಪ್‌ಗೆ ಆಡಲಿರುವ ಸೋಮವಾರ ಪೇಟೆಯ ಅರ್ಜುನ್ ಹಾಲಪ್ಪ



ಫೆಬ್ರವರಿ 24 ರಂದು ಕೌಲಾಂಪುರದಲ್ಲಿ ಆರಂಭವಾದ ವಿಶ್ವಕಪ್ ಹಾಕಿ ಪಂದ್ಯಾಟದಲ್ಲಿ ಪಾಲ್ಗೊಳ್ಳಲಿರುವ ಭಾರತ, ತಂಡಕ್ಕೆ ಆಯ್ಕೆಯಾಗಿರುವ ಕೊಡಗಿನ ಅರ್ಜುನ್ ಹಾಲಪ್ಪ ಅವರು ಈ ಭಾರಿ ನಾವು ವಿಶ್ವ ಕಪ್‌ನ್ನು ಗೆದ್ದೇ ಗೆಲ್ಲುತ್ತೇವೆಂಬ ವಿಶ್ವಾಸ ವ್ಯಕ್ತ ಪಡಿಸಿದ್ದು, ಜಯದ ಮಹತ್ವಾಕಾಂಕ್ಷೆ ಹೊಂದಿದ್ದು, ಅದಕ್ಕಾಗಿ ಶಕ್ತಿ ಮೀರಿ ಪ್ರಯತ್ನಿಸುವುದಾಗಿ ತಿಳಿಸಿದ್ದಾರೆ.

ವಿಶ್ವ ಕಪ್‌ನಲ್ಲಿ ಪಾಲ್ಗೊಳ್ಳುವ ಭಾರತ ತಂಡಕ್ಕೆ ಆಯ್ಕೆಯಾದ ಹಿನ್ನಲೆಯಲ್ಲಿ ಅರ್ಜುನ್ ಅವರನ್ನು ಸಂಪರ್ಕಿಸಿದಾಗ ಈ ಮೇಲಿನ ಇಂಗಿತವನ್ನು ವ್ಯಕ್ತ ಪಡಿಸಿದರು. ಈ ಹಿಂದೆ ಆಸ್ಟ್ರೇಲಿಯಾದ ಹೋಬರ್ಟ್‌ನಲ್ಲಿ ಜರುಗಿದ ಜೂನಿಯರ್ ವಿಶ್ವ ಕಪ್ ಹಾಕಿಯಲ್ಲಿ ಪಾಲ್ಗೊಂಡಿದ್ದ ಸಿಹಿ ನೆನಪಿನಲ್ಲಿಯೇ ಈ ಬಾರಿಯೂ ತಂಡದ ಜಯಕ್ಕೆ ಮುಂದಡಿ ಇಡುವುದಾಗಿ ಹೇಳಿದ ಅರ್ಜುನ್ ಹಾಲಪ್ಪ ತಂಡಕ್ಕೆ ಆಯ್ಕೆಯಾಗಿರುವ ಸಂತಸದೊಂದಿಗೆ ಜವಾಬ್ದಾರಿಯನ್ನು ತಂದಿತ್ತಿದೆಯೆಂದು ಗಂಭೀರ ನುಡಿಯಾಡಿದರು.

ಹಾಕಿಯ ತವರೂರಾದ ಕೊಡಗಿನ ಅಭಿಮಾನಿಗಳಿಂದ ನನಗೆ ಈ ಹಿಂದೆಯೂ ಉತ್ತೇಜನ ದೊರೆತಿದೆ. ಈ ಬಾರಿಯೂ ಅದರ ನಿರೀಕ್ಷೆಯೊಂದಿಗೆ ರಾಷ್ಟ್ರದ ಜನತೆಯ ಆಶೀರ್ವಾದದೊಂದಿಗೆ ಮೈದಾನ ಕ್ಕಿಳಿಯಲಿರುವ ನಾವು, ಕಪ್ ಗೆದ್ದೆ ತೀರುತ್ತೆವೆಂಬ ಅಚಲ ವಿಶ್ವಾಸವನ್ನು ಅರ್ಜುನ್ ಹಾಲಪ್ಪ ವ್ಯಕ್ತಪಡಿಸಿದರು.

ಈ ಮೊದಲು ಸಂಭವನೀಯ ಆಟಗಾರರ ಪಟ್ಟಿಗೆ ಆಯ್ಕೆ ಯಾಗಿದ್ದ ಕೊಡಗಿನ ಮತ್ತೋರ್ವ ಆಟಗಾರ ಬಲ್ಲಚಂಡ ಲೆನ್ ಅಯ್ಯಪ್ಪ ಅವರು ಅಂತಿಮ ತಂಡಕ್ಕೆ ಆಯ್ಕೆಯಾಗದಿರುವುದು ಕೊಡಗಿಗೆ ದೊಡ್ಡ ನಷ್ಟ. ಉಜ್ವಲ ಭವಿಷ್ಯ ಹೊಂದಿರುವ ಲೆನ್ ಅವರಿಗೆ ಮುಂದಿನ ದಿನಗಳು ಆಶಾದಾಯಕವಾಗಲಿ ಎಂದು ಅರ್ಜುನ್ ಹಾರೈಸಿದರು.

ಪ್ರಸ್ತುತ ಭಾರತ ಹಾಕಿ ತಂಡದಲ್ಲಿ ಖ್ಯಾತ ಆಟಗಾರ ಧನರಾಜ್ ಪಿಳ್ಳೆ ಸಹಿತ ಕರ್ನಾಟಕದ ಮತ್ತೋರ್ವ ಆಟಗಾರ ಸಾಬುವರ್ಕಿ ಸೇರಿದ್ದಾರೆ. ತಂಡವು ತಾ. 24 ರಂದು ಜಪಾನ್ ವಿರುದ್ಧ 26 ರಂದು ಮಲೇಷಿಯಾ ಮಾ. 1 ರಂದು ಇಂಗ್ಲೇಂಡ್ 2 ರಂಡು ಕ್ಯೂಬಾ, 4 ರಂದು ಪೋಲ್ಯಾಂಡ್ ಹಾಗೂ 5 ರಂದು ಆಸ್ಟ್ರೇಲಿಯಾ ವಿರುದ್ಧ ಸೆಣಸಲಿದೆ.

## ಕಲ್ಯಾಟಂಡ ಗಣಪತಿ ಅವರಿಗೆ ರಾಜ್ಯ ಪತ್ರಿಕಾ ಅಕಾಡೆಮಿ ಪ್ರಶಸ್ತಿ



ಮೈಸೂರು ಮಿತ್ರ ಹಾಗೂ ಸ್ಟಾರ್ ಆಫ್ ಮೈಸೂರು ಪತ್ರಿಕೆಗಳ ಸಂಪಾದಕ ಕೆ. ಬಿ. ಗಣಪತಿ ಅವರಿಗೆ ಕರ್ನಾಟಕ ರಾಜ್ಯ ಪತ್ರಿಕಾ ಅಕಾಡೆಮಿ ಪ್ರಶಸ್ತಿ ಲಭ್ಯವಾಗಿದೆ. ಇವರೊಂದಿಗೆ ಇತರ 15 ಮಂದಿಗೆ ಈ ಪ್ರಶಸ್ತಿ ದೊರೆತಿದೆ.

ಕೊಡಗು ಜಿಲ್ಲೆಯವರಾಗಿರುವ ಕಲ್ಯಾಟಂಡ ಬಿ. ಗಣಪತಿ ಅವರು ಮೂಲತಃ ವಕೀಲರಾಗಿದ್ದಾರೆ. 1965 ರಿಂದಲೇ ಪತ್ರಿಕೋದ್ಯಮದಲ್ಲಿ ತೊಡಗಿಸಿಕೊಂಡ ಗಣಪತಿ ಅವರು, 1970 ರವರೆಗೆ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ವರದಿಗಾರ, ಉಪ ಸಂಪಾದಕನಾಗಿ, 1977 ರ ವರೆಗೆ ಪೂನಾದಲ್ಲಿರುವ ಜಾಹೀರಾತು ವಿಭಾಗದ ಕಾರ್ಯನಿರ್ವಾಹಕ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದಾರೆ. 1978 ರಲ್ಲಿ ಸ್ಟಾರ್ ಆಫ್ ಮೈಸೂರು ಹಾಗೂ ಮೈಸೂರು ಮಿತ್ರ ಪತ್ರಿಕೆಗಳನ್ನು ಹೊರತಂದ ಗಣಪತಿ ಪ್ರಸ್ತುತವೂ ಆ ಪತ್ರಿಕೆಗಳ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

1992 ರಲ್ಲಿ ಆದರ್ಶವಾದಿ ಎಂಬ ಕನ್ನಡ ಕಾದಂಬರಿ 1994 ರಲ್ಲಿ ಆಂಗ್ಲ ಭಾಷೆಯಲ್ಲಿ ಕೊಡಗಿನ ಕುರಿತು ಕಾದಂಬರಿ, ಅಮೆರಿಕಾ-ಆನ್ ಏರಿಯಾ ಆಫ್ ಲೈಟ್ ಎಂಬ ಪ್ರವಾಸ ಕಥನ ಬರೆದಿದ್ದಾರೆ. ಇವರು ಪತ್ರಿಕಾ ಅಕಾಡೆಮಿಯ ಸದಸ್ಯರಾಗಿಯೂ 2 ವರ್ಷಗಳ ಕಾಲ ಕಾರ್ಯನಿರ್ವಹಿಸಿದ್ದರು.

- ಸಂಗಾತಿ

**ಚುಟುಕಗಳು**

### ಗುಟ್ಕ

ಸೇವಿಸಬೇಡಿ
ಗೆಳೆಯರೆ
ಗುಟ್ಕಾ
ಸೇವಿಸಿದರೆ
ಪ್ರಾಣವೇ
ಅನ್ನುವುದು
ಗೊಟಕ್!!

ವಿಳಾಸ
ಕಾನಡ್ಕ ಹನೀಶ್ ಅಪ್ಪಾಜಿ
ಮರಗೋಡು ಗ್ರಾಮ ಮತ್ತು ಅಂಚೆ

ಕೊಡಗು ಸಂಗಾತಿಯನ್ನು ತಪ್ಪದೆ ಕೊಂಡು ಓದಿ.

7ನೇ ಪುಟದಿಂದ

ಪ್ರಾರಂಭವಾಗಲು ಕೇವಲ ನಿಮಿಷಗಳು ಉಳಿದಿದ್ದರಿಂದ ಇಬ್ಬರೂ ಕೂಡಲೇ ಒಳಗೆ ಹೋಗಿ, ನಮ್ಮ ಸೀಟ್ ಸಿಕ್ಕ ಕೂಡಲೆ ಕೈ ಕೈ ಹಿಡುದ ಕುಳಿತುಬಿಟ್ಟೆವು. ಛೆ ಆಕೆಯನ್ನು ಸರಿಯಾಗಿ ಮಾತನಾಡಿಸಲೂ ಅವಕಾಶವಾಗಿರಲಿಲ್ಲ.

ಪಿಕ್ಚರ್ ಶುರುವಾಯಿತು. ಆದರೆ ನನ್ನ ತಲೆಯ ತುಂಬಾ ದಾರಿಯಲ್ಲಿ ಸಿಕ್ಕಿದ ಆ ಮುದುಕನ ನೆನಪುಗಳು ಪಿಕ್ಚರ್ ಮುಗಿದ ನಂತರ ಇಬ್ಬರೂ ರಸ್ತೆಗಿಳಿದು ಸುತ್ತಲಿನ ದೀಪಾಲಂಕಾರಗಳನ್ನು ಆನಂದಿಸುತ್ತಾ ನಿಧಾನವಾಗಿ ಚಲಿಸುತ್ತಿದ್ದ ಜನಸಾಗರದಲ್ಲಿ ಬೆರೆತೆವು. "ಆ ಮುದುಕನನ್ನು ಕೂರಿಸಿಕೊಂಡು ರಸ್ತೆಯ ಕೊನೆಯಲ್ಲಿ ಇಳಿಸಿ ಬಿಟ್ಟಿದ್ದರೆ ನಿನ್ನ ಗಂಟೇನು ಹೋಗುತ್ತಿತ್ತು?" ಎಂದು ನನ್ನ ಮನಸ್ಸು ನನ್ನನ್ನು ಪದೇ ಪದೇ ಬೈಯುತ್ತಿತ್ತು. ಅದೇ ರಸ್ತೆಯನ್ನು 5 ನೇ ಬಾರಿ ಕ್ರಮಿಸಿದೆವು. "ಶ್ಯಾಂ.... ಈ ರೋಡ್ ಯಾವಾಗ್ಲೂ ಯಾಕ್ ಬಿಜಿ ಆಗಿರುತ್ತೆ ಗೊತ್ತಾ ನಿಂಗೆ?!" ಶ್ಯಾಂ", ಆಕೆ ನನ್ನ ಕೈಯನ್ನು ಜಗ್ಗಿ ಕೇಳಿದಳು. "ಗೊತ್ತಿಲ್ಲ ಕಣೆ ಯಾಕೆ?" ನಾನು ಪ್ರಶ್ನಿಸಿದೆ.

"ಯಾಕೆಂದ್ರೆ, ನಮ್ ತರಹನೇ ಮಾಡಕ್ಕೆಲ್ಸ ಇಲ್ದೆ ಇರೋ ಲವರ್ಸ್ ಇಪ್ಪತ್ನಾಲಕ್ ಸರ್ತೀ ಸುಮ್ನೆ ಓಡಾಡ್ತಾರೆ. ಅದಿಕ್ಕೆ" 'ಹೌದು' ಅಂತ ತಲೆ ಆಡಿಸಿ ನಕ್ಕು ಸುಮ್ಮನಾದೆ. ಅವಳು ಹೇಳಿದ್ದು ನಿಜ, ಬ್ರಿಗೇಡ್ ರೋಡ್‌ನಲ್ಲಿ ಮಾಡಕ್ಕೆಲ್ಸ ಇಲ್ದೆ ಇರೋರು ಓಡಾಡೋದೇ ಜಾಸ್ತಿ.

ಯಾಕೋ ಆ ಮುದುಕನ ನೆನಪು ನನ್ನ ತಲೆ ಕೊರೆಯುತ್ತಿತ್ತು. ಇಂದಿನ ಸಂಜೆ ಅಷ್ಟು ಆನಂದಮಯವಾಗಿರಲಿಲ್ಲ. ನನ್ನವಳು ಕೈಗೆ ಕೈ ತಾಕಿಸುತ್ತಾ ಜೊತೆಯಲ್ಲಿ ನಡೆದಿದ್ದರೂ, ಆ ಮುದುಕನನ್ನು ಬಿಟ್ಟು ನಡೆದ ನೆನಪು ವೇದನೆಯನ್ನುಂಟುಮಾಡಿತ್ತು. ಆಕೆಯನ್ನು ಬಸ್ ಸ್ಟಾಪಿಗೆ ಬೀಳ್ಕೊಟ್ಟು, ಟಾಟಾ ಮಾಡುವ ಒಂದು ಕ್ಷಣ ಮಾತ್ರ ಮುದುಕನನ್ನು ಮರೆತು, ಆಕೆಯ ಮುದ್ದು ಮುಖವನ್ನು ನೋಡುತ್ತಾ ನಿಂತೆ.

ಆಕೆ ಹೊರಟ ನಂತರ, ಗಾಡಿ ತೆಗೆದು, Parking fee" ತೆತ್ತು ಪರ್ಸನ್ನು ಜೇಬಿಗಿಳಿಸಿ ಮನೆಯತ್ತ ಸಾಗಿದೆ.

ನಿಧಾನವಾಗಿ ಗಾಡಿ ಸಾಗಿದ್ದರೂ, ಮನಸ್ಸಿನಲ್ಲಿ ತಳಮಳ ಹಾಗೂ ತಪ್ಪಿತಸ್ಥ ಭಾವನೆಗಳ ಸಾಗರ ವೇಗವಾಗಿ ಚಲಿಸಿತ್ತು. ಸರಿ, ಬೇರೆ ಯಾರಾದರು ಮುದುಕನಿಗೆ ಸಹಾಯ ಮಾಡಿರುತ್ತಾರೆ ಎಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡು ಮುನ್ನಡೆದೆ. ದಾರಿ ಬದಿಯಲ್ಲಿ ಯಾರೋ ಒಬ್ಬಾತ 'ಲಿಫ್ಟ್' ಕೊಡುವಂತೆ ಸನ್ನೆ ಮಾಡಿದ. ನಾನು ಬ್ರೇಕ್ ಹಾಕಿ ನಿಲ್ಲಿಸಿದೆ. ಆತ ಇಪ್ಪತ್ತರ ಯುವಕ,ಇವನೊಬ್ಬ ಕುಂಟುವ ಅಸಹಾಯಕ ಮುದುಕನಲ್ಲ!ಆದರೆ ಆತನಿಗೆ ಸಹಾಯ ಮಾಡುವುದರಿಂದ ಬೆಳಿಗ್ಗೆ ಮಾಡಿದ ತಪ್ಪಿನಿಂದ ಮುಕ್ತಿ ಸಿಗುತ್ತದೆ ಎಂದೆನಿಸಿತು. ಆ ಯುವಕ ನನ್ನ ಹಿಂದೆ ಕುಳಿತುಕೊಂಡ"ಎಲ್ಲಿಗೆ"? ನಾನು ಪ್ರಶ್ನಿಸಿದೆ.

ಈ ರೋಡ್ ಕೊನೇಲಿ ಬಿಟ್ಟು ಬಿಡಿ ಎಂದ.

ರಸ್ತೆಯ ಉಬ್ಬು ತಗ್ಗುಗಳನ್ನು ಕ್ರಮಿಸುತ್ತಾ ಒಂದು ಕಿ. ಮಿ. ದೂರದ ಪೆಟ್ರೋಲ್ ಬಂಕ್ ಬಳಿ ಆತನನ್ನ ಇಳಿಸಿದೆ. "ಥ್ಯಾಂಕ್ಸ್" ಎಂದ ಆ ಯುವಕ ಕತ್ತಲಲ್ಲಿ ಮಾಯವಾಗಿಹೋದ. ಪೆಟ್ರೋಲ್ ಹಾಕಿಸಬೇಕೆಂದು ಜ್ಞಾಪಕಕ್ಕೆ ಬಂದು ಗಾಡಿಯನ್ನು ಬಂಕ್ ನೊಳಗೆ ತಳ್ಳಿದೆ. ಹಣಕ್ಕೆಂದು ಹಿಂದಿನ ಜೇಬಿಗೆ ಕೈ ಹಾಕಿದೆ. ನನ್ನ ಪ್ಯಾಂಟ್‌ನ ಜೇಬ್‌ಗೆ ಕತ್ತರಿ ಹಾಕಲಾಗಿತ್ತು. ನನ್ನ ಪರ್ಸ್ ಜೇಬಿನ ಸಮೇತ ಮಾಯವಾಗಿತ್ತು.

-ಎಡಿಕೇರಿ ಸುದರ್ಶನ್
ಬೆಂಗಳೂರು

# ಕುಶಾಲನಗರ ಗೌಡ ಬಾಂಧವರ ಸಂತೋಷ ಕೂಟ 2002

ಕುಶಾಲನಗರ ಹೋಬಳಿ ಗೌಡ ಜನಾಂಗದ ಸಂತೋಷ ಕೂಟವು 10-2-2002 ರಂದು ಕುಶಾಲನಗರದ ಗೌಡ ಸಮಾಜದಲ್ಲಿ ನಡೆಯಿತು. ಕಾರ್ಯಕ್ರಮದ ಮೊದಲು ಚೆರಿಯಮನೆರಂಜನ, ಹಾಗೂ ಎಡಿಕೇರಿ ಶ್ವೇತರ ನೃತ್ಯದೊಂದಿಗೆ ಸ್ವಾಗತಿಸಿದರು. ಈ ಸಮಾರಂಭದ ಉದ್ಘಾಟನೆಯನ್ನು ಶ್ರೀ ಶ್ರೀಧರ್‌ರವರು ಕೇಟೋಳಿ (ಯಜ್ಞರೋಡ್ ಲೈನ್ಸ್‌ನ ಮಾಲೀಕರಾದ) ನೆರವೇರಿಸಿದರು.

ಸಮಾರಂಭದ ವೇದಿಕೆಯ ಮೇಲೆ ಕುಶಾಲನಗರದ ಗೌಡ ಸಮಾಜದ ಅಧ್ಯಕ್ಷರಾದ ಕೋರನ ಪೂಣಚ್ಚನವರು ವಹಿಸಿದ್ದರು. ಮುಖ್ಯ ಅತಿಥಿಯಾಗಿ ಕೋರನ ಶ್ರೀಮತಿ ಗಂಗಮ್ಮ ಪೂಣಚ್ಚನವರು, ಕುದುಪಜೆ ಶಾಂತಿ ಬೋಜಪ್ಪನವರು ಮತ್ತು ಕೊಡಗನ ರಮೇಶನವರು, ಕೆಟೋಳಿ ಶ್ರೀ ಶ್ರೀಧರ್‌ರವರು ಹಾಗೂ ಕೇಚಪ್ಪನ ಶ್ರೀ ಮೋಹನ್ ಕುಮಾರ್‌ರವರು, ಮತ್ತು ವಿಶೇಷ ಸನ್ಮಾನಿತರಾಗಿ ಮಡಿಕೇರಿ ಪುರಸಭೆಯ ಅಧ್ಯಕ್ಷೆ ಕೂಡಕಂಡಿ ಕಾವೇರಮ್ಮ ಸೋಮಣ್ಣ ಇವರುಗಳು ವೇದಿಕೆಯ ಮೇಲೆ ಆಸೀನರಾಗಿದ್ದರು. ಹಾಲಿ ಅಧ್ಯಕ್ಷರಾದ ಕೋರನ ಪೂಣಚ್ಚನವರು ತಮ್ಮ ಸ್ವಾಗತ ಭಾಷಣದಲ್ಲಿ ಪೊನ್ನಚ್ಚನ ಮೋಹನ್ ರವರು ತುಂಬಾ ಶ್ರಮ ಪಟ್ಟು ಈ ಸಮಾಜದಲ್ಲಿ ಒಕ್ಕೂಟದ ಸಮಾರಂಭವನ್ನು ಏರ್ಪಡಿಸಿದ್ದಾರೆ. ಹಾಗೂ ಪುರಸಭೆ ಅಧ್ಯಕ್ಷೆ ಕಾವೇರಮ್ಮನವರನ್ನು ಸ್ವಾಗತಿಸಲಾಯ್ತು. ಇವುಗಳ ಮಧ್ಯೆ ಕುಶಾಲನಗರ ಹೋಬಳಿಯ ಗೌಡ ಜನಾಂಗದ ದೂರವಾಣಿ ಡೈರೆಕ್ಟರಿಯನ್ನು ಕೇಚಪ್ಪನ ಮೋಹನ್ ಬಿಡುಗಡೆ ಮಾಡಿದರು.

ಸಮಾರಂಭದಲ್ಲಿ ಕುಶಾಲನಗರ ಗೌಡ ಸಮಾಜಕೊಸ್ಕರವಾಗಿ ಶ್ರಮಿಸಿದ ಗಣ್ಯ ವ್ಯಕ್ತಿಗಳಾದ ಕಾಳೇರಮ್ಮನ ನಾಣಯ್ಯ (ನಿವೃತ್ತ D.Y.S.P.ಯವರು) ಕುದುಕುಳಿ ಸುಬ್ಬಯ್ಯನವರನ್ನು, ಕೋರನ ನಂಜುಂಡನವರನ್ನು ಮತ್ತು ಅಚ್ಚಪಟ್ಟೀರ ರಾಜೇಶ್ ರ್‍ಯಾಂಕ್ ವಿಜೇತ (I.T.I) ಇವರುಗಳನ್ನು ಹಾರ ಹಾಕಿ ಶಾಲು ಹೊದಿಸಿ ಫಲ ತಾಂಬೂಲ ಕೊಟ್ಟು ಕೇಟೋಳಿ ಶ್ರೀಧರ್‌ರವರು ಸನ್ಮಾನಿಸಿದರು. ಇವರ ಕಿರು ಪರಿಚಯವನ್ನು ಕೊಡಗನ ರಮೇಶ ಹಾಗೂ ನಟುಬೆಟ್ಟಿರ ಮೋಹನ್ ಸಭೆಗೆ ಪರಿಚಯಿಸಿದರು.

10ನೇ ಪುಟಕ್ಕೆ

ಅಯ್ಯಂಡ್ರ ಶಾಂತಿ ತಮ್ಮಯ್ಯನವರು, ಪೆರುಬಾಯಿ ತುಳಸಿ ಸುಬ್ರಮಣಿಯವರು ನಾಟೋಳಿನ ಕುಮಾರಿ ಹೇಮಲತ ಮಾದಯ್ಯನವರು ಮತ್ತು ವಿಶೇಷ ಸನ್ಮಾನಿತರಾಗಿ ಪುರಸಭೆ ಅಧ್ಯಕ್ಷೆ ಕೊಡಕಂಡಿ ಕಾವೇರಮ್ಮನವರನ್ನು ವನಿತೆ ಶಾಲು ಹೊದಿಸಿ ಹಾರ ಹಾಕಿ ಫಲ ಕೊಟ್ಟು ಸನ್ಮಾನಿಸಿದರು. ಇವರ ಕಿರು ಪರಿಚಯವನ್ನು ಕುಂಬಗೌಡನ ಸೋಮಣ್ಣನವರು ಮತ್ತು ಕೊಡಗಿನ ರಮೇಶನವರು ನಿರೂಪಿಸಿದರು. ಕಾವೇರಮ್ಮನ ನಾಣಯ್ಯನವರು ಅರೆ ಭಾಷೆಯಲ್ಲಿ ಗೌಡ ಜನಾಂಗದ ಸಂಸ್ಕೃತಿಯ ಬಗ್ಗೆ ಮಾತನಾಡಿದರು. ಇವರ ಭಾಷಣ ಜನರ ಮೆಚ್ಚುಗೆ ಗಳಿಸಿತು. ಕೋರನ ಗಂಗಮ್ಮನವರು ಗೌಡ ಜನಾಂಗದ ಮಹಿಳೆಯರು ತನ್ನ ಕಾಲ ಮೇಲೆ ತಾನು ನಿಲ್ಲುವಂತಳವಳಾಗಬೇಕು ಹಾಗೂ ಹೆಣ್ಣು ಅಬಲೆಯಲ್ಲಿ ಸಬಲೆಯೆಂಬ ನಾಣ್ಣುಡಿಯನ್ನು ವ್ಯಾಖ್ಯಾನಿಸಿದರು. ಅಚಾರ ವಿಚಾರಗಳ ಬಗ್ಗೆ ವಿವರಣೆ ನೀಡಿದರು. ಗೌಡ ಜನಾಂಗದ 10 ಕುಟುಂಬ ಹದಿನೆಂಟು ಗೋತ್ರದ ಸಮೂಹವು ಒಂದು ಸಂಸಾರ ಇದ್ದಂತೆ ಈ ಸಮಾರಂಭಕ್ಕ ಎಲ್ಲರೂ ಅರ್ಹರು ಯಾವುದೇ ಕೀಳರಿಮೆಯಿಲ್ಲ ಎಂದು ತಿಳಿಯಹೇಳಿದರು. ಊಟದ ನಂತರ ಸಾಂಸ್ಕೃತಿಕ ಕಾರ್ಯಕ್ರಮವು ಮಹಿಳೆಯರ ಕೋಲಾಟದೊಂದಿಗೆ ಆರಂಭವಾಯ್ತು. ಕೋಲಾಟ ಎಲ್ಲರ ಗಮನ ಸೆಳೆದಿದ್ದು ಪೊನಿಧ್ವನಿ ಸುರುಳಿಯ ನೃತ್ಯವಾಗಿತ್ತು. ಹಿರಿಯ ಬಾಲಕಿಯ ನೃತ್ಯ ಮತ್ತು ಹಿರಿಯ ಬಾಲಕರ ನೃತ್ಯ ನಾಟಕ ಭರತನಾಟ್ಯ, ಹಾಡುಗಳು, ರಸ ಪ್ರಶ್ನೆ ಕಾರ್ಯಕ್ರಮ ಎಲ್ಲವೂ ರಸವತ್ತಾಗಿತ್ತು. ಹಾಗೂ ಪುರುಷರ ಹಗ್ಗ ಜಗ್ಗಾಟ ಮತ್ತು ಮಹಿಳೆಯರ ಹಗ್ಗಜಗ್ಗಾಟವು ರೋಮಾಂಚಕವಾಗಿದ್ದವು. ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿದ ಮಕ್ಕಳಿಗೆ ಬಹುಮಾನವನ್ನು ವಿತರಿಸಲಾಯ್ತು.

ಪೊನ್ನಚನ ಮೋಹನ್‌ನವರು ಕೊನೆಯದಾಗಿ ವಂದನಾರ್ಪಣೆ ಮಾಡಿದರು. ಹಾಗೂ ಈ ಎಲ್ಲಾ ಕಾರ್ಯಕ್ರಮದ ನಿರೂಪಣೆಯನ್ನು ಸೂದನ ಗೋಪಾಲನವರು ನಡೆಸಿಕೊಟ್ಟರು.

ಸಂತೋಷ ಕೂಟವು ಇನ್ನು ಮುಂದೆ ಹೆಚ್ಚಿನ ಸಂಖ್ಯಾಬಲದಿಂದ ಕೂಡಿ ಪ್ರೀತಿ ವಿಶ್ವಾಸ ಮೆಚ್ಚುಗೆಗಳಿಸಿ ಜನರ ಮನಸ್ಸಿಗೆ ಪಾತ್ರರಾಗುವಂತಾಗಲಿ ಎಂದು ಆಶಿಸುವ.

ವರದಿ: ಆಜಡ್ಕ ರಾಣಿ ಬಾಲಕೃಷ್ಣ
ಕುಶಾಲನಗರ.

# ಪತ್ರಿಕೆ ವಿಭಾಗ

**ವ್ಯಕ್ತಿ ಪರಿಚಯ:**

ನಮ್ಮ ನೆಂಟರು ಆಗಿದ್ದರು ಸಹ ನೂಜಿ ದಿನಕರಗೌಡರ ಬಗ್ಗೆ ನಮ್ಗೆ ಗೊತ್ತಿಲ್ಲದಂತ ವಿಷಯನ ಪಟ್ಟಡ ಪ್ರಭಾಕರನವು ಅವರ ಬಗ್ಗೆ ತುಂಬಾ ಲಾಯ್ಕಲಿ ವಿವರ ಕೊಟ್ಟದಕ್ಕಾಗಿ ನಮ್ಮ ಕೊಡಗು ಸಂಗಾತಿ ಸಂಪಾದಕರಿಗೆ ತುಂಬು ಹೃದಯದ ಧನ್ಯವಾದ ಹೇಳ್ತ ಒಳೆ ಕೊಡಗು ಸಂಗಾತಿ ತುಂಬಾ ಲಾಯ್ಕಲಿ ಮೂಡಿ ಬರುತ್ತ ವಿಟ್ಟು. ನಮ್ಮ ಭಾಷೆ. ನಮ್ಮ ಸಂಸ್ಕೃತಿ, ಉಳಿಯಕಾದರೆ ಕೊಡಗು ಸಂಗಾತಿ ಒಂದೆ ದಾರಿ. ಆದರೆ ಈಗ ತಿಂಗಳಿಗೆ ಒಂದೆ ಸಲ ಸಂಗಾತಿ ಬರುವ ವಿಷಯ ತಿಳ್ದು ನಮ್ಗೆಲ್ಲ ತುಂಬಾ ಬೇಜಾರಾಗುತ್ತುಟ್ಟು ಯಾಕೆ? ನಮ್ಗೆಲ್ಲರ ಪ್ರೀತಿಯ ಕೊಡಗು ಸಂಗಾತಿನ ಉಳ್ಸಿಕಣಿಕೆ ಯಾಕೆ ಜನ ಹಿಂದೆ ಮುಂದೆ ನೋಡ್ತ ಒಳೊಂತ ಅರ್ಥ ಆಜುಲೆ ನಾವು ಸುಮ್ಮ ಸುಮ್ಮನೆ ದುಡ್ಡು ಖರ್ಚು ಮ ಆಡುವೆ ಸಂಟ್ರ ನಾಡ್‌ತ್ ಅದಲ್ಲಿ ಸಾಕಷ್ಟು ನಮ್ಮ ಖರ್ಚು ಮಾಡ್ವೆ. ನಮ್ಮ ಸಂಗಾತಿನ ದುಡ್ಡು ಕೊಟ್ಟು ತಕನಿಕೆ ಯಾಕೆ ಒದ್ದಾಡ್ತಾ ಒಳೋತ ತಿಳಿತ ಇಲ್ಲೆ. ನಮ್ಮ ಸಂಗಾತಿ ನೂರಾರು ವರ್ಷ ಚೆನ್ನಾಗಿರಕು ಅಂದರೆ ಎಲ್ಲವು ಪ್ರೀತಿಯಿಂದ ಚಂದ ಕೊಟ್ಟು ತಕನೊಕು ಆಗ ನಮ್ಮ ಅರೆಭಾಷೆನು ಉಳ್ದದೆ ನಮ್ಮ ಪೆದ್ದ ತಿನು ಸಂಸ್ಕೃತಿನು ಉಳ್ದದೆ. ನಮ್ಮ ನಿಮ್ಗೆಲ್ಲರಲ್ಲಿ ಬೇಡಿಕಣೆ.

**ಹರಿಣಿಗೋಪಾಲ ಚೇತನ್**
ಮಜುಗದ್ದೆ ಮನೆ ವಿಜಯನಗರ ಬೆಂಗಳೂರು.

## ಅ ಚಿಪಟ್ಟಿರ ಯಂಕಪ್ಪ ರಾಜೇಶ್‌ಗೆ ರಾಜ್ಯ ಮುಟ್ಟದ ರ್‍ಯಾಂಕ್



ಅಖಿಲ ಭಾರತ ವೃತ್ತಿ ಪರೀಕ್ಷೆಯಲ್ಲಿ ಮಡಿಕೇರಿ ಐ.ಟಿ.ಐ. ಗೆ ಪ್ರಥಮ ರ್‍ಯಾಂಕ್, 2000-2001 ನೇ ಸಾಲಿನ ಕಳೆದ ಜುಲೈ ತಿಂಗಳಲ್ಲಿ ನಡೆದ ಅಖಿಲ ಭಾರತ ವೃತ್ತಿ ಪರೀಕ್ಷೆಯಲ್ಲಿ ಮಡಿಕೇರಿಯ ಕೈಗಾರಿಕಾ (I.T.I) ತರಬೇತಿ ಸಂಸ್ಥೆಯ ಮಿಷನರಿ (Mishinist) ವಿಭಾಗದಲ್ಲಿ ಎ. ವೈ. ರಾಜೇಶ್ B.Com. ಇವರು ರಾಜ್ಯ ಮಟ್ಟದಲ್ಲಿ ಪ್ರಥಮ ರ್‍ಯಾಂಕ್‌ಗಳಿಸಿ ಸಂಸ್ಥೆಗೆ ಕೀರ್ತಿ ತಂದಿರುತ್ತಾರೆ.(ಅಚ್ಚಪಟ್ಟೀರ ವೆಂಕಪ್ಪ ಚಂದ್ರಕಲಾರವರ ಸುಪುತ್ರ ಮೊಣ್ಣಂಗೇರಿ ಗ್ರಾಮ ಮಡಿಕೇರಿಯವರಾಗಿರುತ್ತಾರೆ.)

ಕೋಳುಮುಡಿಯನ ಮಿಲನ್.

---

ಹೈದ : ನಿನ್ನ ಪ್ರೀತಿಸುವ ಸುರುನ ಹೈದ ನಾನೇನ್? ಗೂಡೆ : ಹೌದು ಬಾಕಿಯವು ಸ್ವಲ್ಪ ವಯಸ್ಸಾದವು.

ಒಂದ್ ತಮಾಸೆ ಸಭೆಲಿ ಒಬ್ಬ ಜೋಕ್ ಹೇಳ್ತಿತ್. ಸಭೆಲಿದ್ದವೆಲ್ಲವು ಬಿದ್ ಬಿದ್ ನೆಗಾಡ್ತಿದ್ದೊ. ಆದ್ರೆ ಒಬ್ಬ ಮಾತ್ರ ಸುಮ್ಮನೆ ಕುದ್ದಿತ್, ಅವನ ಜೊತೆಲಿ ಮತ್ತೊಬ್ಬ ಕುದ್ದಿದ್ದಂವ ಕೇಳ್ತ್.........ಅಲ್ಲಾ.......... ಎಲ್ಲವು ನೆಗಾಡ್‌ಕಂತ ನೀನೊಬ್ಬನೆ ಯಾಕೆ ಸುಮ್ಮನೆ ಕುದ್ದೋಳ .? ಅದ್ಕೆ ಅಂವ ಹೇಳ್ತ್. ನಂಗೆ ಅವರಿಗೆ ಆದುಲೆ ಮನೆಗೋಗಿ ನೆಗಾಡ್ನೆತ.

ಮಳ್ಳನ ಎಸ್. ವಸಂತ, ಮಕ್ಕೊಂದೂರು

## ಬರೆಯಿರಿ ಸಂಗಾತಿಗೆ !

ಬರೆಯಿರಿ ಕೊಡಗು ಸಂಗಾತಿಗೆ
ಷೋಡಶಿ ಪ್ರಾಯದ ಓದುವ ಮಕ್ಕಳೇ
ಹವ್ಯಾಸ ಇರುವ ಉತ್ಸಾಹಿ ಯುವಶಕ್ತಿಯೇ
ಬರೆಯಿರಿ, ಬರೆಯಿರಿ, ಕೊಡಗ್ ಸಂಗಾತಿಗೆ॥

ಬರೆಯಿರಿ ಕೊಡಗು ಸಂಗಾತಿಗೆ
ಸ್ವ ಪ್ರತಿಭೆಯಿಂದ ಕೂಡಿರಲಿ
ಸ್ವಾಭಿಮಾನದ ಗುರಿಯಿರಲಿ
ಖಂಡಿತನಾವ್ ಪ್ರಕಟಿಸುತ್ತೇವೆ॥

ಅರ್ಥಗರ್ಭಿತ ರಸವತ್ತಳೆಯ
ಕಥೆ ಕವನಗಳನ್ನು ಬರೆಯಿರಿ.
ಜನಾಂಗದ ಚಿಂತನೆ ವಿಮರ್ಷೆಯಿರಲಿ
ಮಕ್ಕಳೆ ನೀವು ಯಾರಿಗಂಜಲೂಬೇಡ॥

ಭಾಷೆ ಬಗ್ಗೆ ಹೆಮ್ಮೆ ಇರಲಿ
ಸಂಸ್ಕೃತಿ ಬಗ್ಗೆ ಅಭಿಮಾನವಿರಲಿ
ಸಂಪ್ರದಾಯಲಿ ನಂಬಿಕೆಯಿರಲಿ
ಗುರು ಹಿರಿಯರಲಿ ಭಕ್ತಿಯು ಇರಲಿ॥

ಧೃತಿ ಗೆಡದೆ ಬಗ್ಗದೆ ಕುಗ್ಗಬೇಡ
ಜಗ್ಗದಿರು ಎಂದಿಗೂ ನೀ ಕೀಳಿರಿಮೆಯಿಂದ
.ಯುವಶಕ್ತಿಯ ಬೆಳ್ಸಿ ಪೋಷಿಸೋಣಾ
ಹರಸಿ ಹಾರೈಸುವೆವು ನಾವು॥

ಬಂದಿದೆ ಕೊಡಗಿಗೆ ಗಂಡಾಂತರ
ತಳವೂರಿದೆ ಪೀಡೆ ಪಾಲೂರಿನಲಿ
ತೊಲಗಿಸು ನೀ ಧೈರ್ಯ ದಿಂದ
ನಿನ್ನ ನೀ ಕಾಯ್ಬು ಪಾಲೂರಪ್ಪನೊಂದಿಗೆ॥

ಗ್ರಾಮ ಗ್ರಾಮಲಿ ಅಷ್ಟ ಮಂಗಲ ವಾಗಲಿ
ಶಕ್ತಿಕೊಡು ನೀ ಆ ಗ್ರಾಮ ದೇವತೆಗಳಿಗೆ
ಪುರ್ನಶಕ್ತಿ ನೀಡು ಈ ನಾಡದೇವತೆಗಳಿಗೆ
ಅದರಿಂದ ಬರಲಿ ಕ್ಷೇಮ ಈ ಕೊಡಗು ನಾಡಿಗೆ॥

ಜಯವಾಗಲಿ ಕೊಡಗಿನ ಕಲಿಗಳಿಗೆ
ಜಯವಾಗಲಿ ಯುವಶಕ್ತಿಗೆ
ಜಯವಾಗಲಿ ಹರಿಶ್ಚಂದ್ರ ಪಾಲೂರಪ್ಪರಿಗೆ
ಜಯವಾಗಲಿ ಅಮ್ಮನೂರು ಶ್ರೀ ಕಾಳಿಕಾಂಬೆಗೇ॥

ಜಯ ಜಯ ಕನ್ನಂಬಾಡೀ
ಜಯಜಯ ಕನ್ನಂಬಾಡೀೀ
ಜಯಜಯ ಕನ್ನಂಬಾಡೀೀೀ
ಜಯಜಯ ಕನ್ನಂಬಾಡೀೀೀೀ

ರಚನೆ : ಪಟ್ಟಡ ಪ್ರಭಾಕರ

## ಬೇವರ್ಸೀ

ಓ ನನ್ನ ಪ್ರೇಯಸಿ ನೀನೇ ನನ್ನ ಉಸಿರು
ನಿನ್ನ ಮೇಲೆ ನನಗೆ ಮನಸ್ಸು ನಿನಗಿಲ್ಲವೇ .
ನನ್ನ ಮೇಲೆ ಮನಸ್ಸು? ನನಗೆ ನೀನೇ ಜೀವ
ನಿನ್ನ ಮೇಲೆ ನನ್ನ ಪ್ರಾಣ, ಬಿಟ್ಟಿರುವೆ ಮೂರು ಹೊತ್ತು ಊಟ,
ಆದರೆ ಬಿಟ್ಟಿರಲಾರೆ ಮೂರು ನಿಮಿಷ ನಿನ್ನ
ಮಲಗಿದರೆ ಹತ್ತುವುದಿಲ್ಲ ನಿದ್ದೆ, ನಿದ್ದೆ
ಹತ್ತಿದರು ನನ್ನ ಮನಸ್ಸನ್ನು ನೀ
ಕಾಡುತ್ತಿಯಲ್ಲಾ? ಓ ನನ್ನ ನಲ್ಲೆ ನಿನ್ನ ಹೇಗೆಂದು ಬಣ್ಣಿಸಲಿ, ನಿನ್ನ
ಹೊಗಳಲು ನೂರು ನಾಲಿಗೆ ಸಾಲದು ದಿನಾ ನಿನ್ನ ನೆನಪಲ್ಲೇ ನನ್ನ
ಹೃದಯ ಕರಗಿ, ಒಣಗಿ ಬರಿದಾಗುತ್ತಿದೆಯಲ್ಲಾ ಲಲನಿ, ನಿನ್ನ
ರೂಪಕ್ಕೆ ಜಗತಿನಲ್ಲಿ ನಿನಗಿಲ್ಲ ಸರಿ ಸಾಟಿ ಸಮನಾರು! ನೀನೇ
ನನ್ನ ಬಾಳ ಸಂಗಾತಿಯಾಗುವವಳು ನೀನೇ ನನ್ನ ಊರ್ವಸೀ
ಕೊನೆಗೆ ಎಲ್ಲಿಯಾದರೂ ನೀ ನನಗೆ ಕೈ ಕೊಟ್ಟರೆ
ನೀನಾಗುವೆ ನನಗೆ ಬೇವರ್ಸೀ

**ತೋಟಂಬೈಲು ಪಿ. ಗಣಪತಿ**

## ನುಡಿಮುತ್ತುಗಳು

ನಗುವವನು ಬಾಳುತ್ತಾನೆ, ನಗದವನು ಬಳಸುತ್ತಾನೆ
ಜೀವನದಲ್ಲಿ ವ್ಯರ್ಥವಾದ ದಿನವೆಂದರೆ ನೀವು ನಗದೇ ಇರುವ ದಿನ.
ಜೀವನ ನನ್ನ ಪಾಲಿಗೆ ರಣರಂಗವಲ್ಲ, ಸ್ನೇಹರಾಗ
ಆದ್ದರಿಂದಲೇ ಬದುಕನ್ನು ಕುರಿತು ನನಗೆ ಸ್ಪರ್ಧೆಯಿಲ್ಲ ಶ್ರದ್ಧೆ ಇದೆ.
ಸೌಂದರ್ಯವನ್ನು ಸೃಷ್ಟಿಸುವುದು ಕಲೆ.
ಜ್ಞಾನಿಯ ವಿವೇಕ ಹಾಗೂ ಯುಗ ಯುಗಾಂತರದ
ಅನುಭವವನ್ನು ಸಂರಕ್ಷಿಸುವುದೇ ಸುಭಾಷಿತ
ಬಿಟ್ಟ ಬಾಣ ಆಡಿದ ಮಾತು ಗತ ಜೀವನ ಮತ್ತು
ಕಳೆದುಕೊಂಡ ಅವಕಾಶ ನಾಲ್ಕು ಎಂದಿಗೂ ತಿರುಗಿ ಬರುವುದಿಲ್ಲ.
ಆನಂದ ಹೆಚ್ಚು ಪಡೆಯುವುದರಲ್ಲಿ ಇಲ್ಲ.
ಕಡಿಮೆ ಬಯಸುವುದರಲ್ಲಿ ಇದೆ.
ಸಾವಿರ ವರ್ಷ ಬದುಕುತ್ತೇನೆಂದು ಕೆಲಸ ಮಾಡು,
ನಾಳೆಯೇ ಸಾಯುತ್ತೇನೆಂದು ಕೆಲಸ ಮಾಡು,
ಸುಖಿಯಾಗಿರಬೇಕೆಂದರೆ ಪರರ ಬಗ್ಗೆ ಚಿಂತಿಸು
ದುಃಖಿಯಾಗಲು ಬಯಸುವುದಾದರೆ ನಿನ್ನ ಬಗ್ಗೆ ಚಿಂತಿಸು
ಸಿಟ್ಟು ಬಂದಾಗ ಖಡ್ಗವನ್ನು ಬೇಕಾದರೆ ತೆಗೆಯಿರಿ.
ಆದರೆ ನಾಲಗೆಯನ್ನು ಮಾತ್ರ ತೆಗೆಯಬೇಡಿ.

ಕೃಪೆ: ವಿಕ್ರಮ ವಿಜಯದಶಮಿ ವಿಶೇಷಾಂಕ
ಸಂಗ್ರಹ: ಕೆ. ಟಿ. ರಾಮಪ್ಪ (ಕುದುಕುಳಿ)
ಉದಯಪ್ರಸ್, ಸೋಮವಾರಪೇಟೆ.

# ಮರಳಿ ಬಂದ ಸವಿ ನೆನಪ್‌ಗ

ಆಗ ತಾನೆ ಮ್ಮೆ ಚುರುಗುಟ್ಟಿಸಿದ್ದ ಬಿಸಿಲ ಕಿರಣದ ಮರೆಯಾಗಿಸಿ ಮುಸ್ಸಂಜೆ ಅಂಗಳ ರಂಗವಲ್ಲಿ ಚೆಲ್ಲುತ್ತಾ ಇತ್ತ್. ಇನ್ನೇನ್ ಬೆಳದಿಂಗಳ್ ಹಾಸುವ ಹೊತ್ತ್. ಸಹನಾ ತನ್ನಕೆಲಸನ್ನೆಲ್ಲಾ ಮುಗಿಸಿ, ಮನದಲ್ಲೇ ನೆನ್‌ಪ್‌ಗ ರಸಕ್ಷಣದ ಈ ದಿನಗಳ ಬೆನ್ನು ಹತ್ತಿದೊ. ಎಂತಹಾ ಮಧುರ ದಿನ ಆಗಿದ್ದೊ. ಅವು? ನೋವು-ನಲಿವಲಿ ಕಳೆದ ಆ ಸುಮಧುರ ಕ್ಷಣಗಳು ಮತ್ತೆ ಬಂದವೆನಾ? ಪಾಪ.... ಅಪ್ಪ-ಅಮ್ಮನ ಪ್ರೀತಿನ ಕಾಣದ ಗೂಡೆಯೊಬ್ಬು, ಅಂದ್ ಅನಾಥೆಯಾಗಿ ಬೀದಿಲಿ ಅಳ್‌ತಾ ನಿಂತಿತ್ತ್. ಆ ಮಾರ್ಗ ಆಗಿಯೇ ಮಗಳ ಸಹನಾನ ಒಟ್ಟಿಗೆ ಕಾರಲಿ ಬಂದಳ್ ರಘುನಾಥರಾಯರು, ಆ ಅನಾಥ ಬಾಲಕಿನ ನೋಡಿ ಮರುಗಿದ್ದೇ. ಅಷ್ಟೊತ್ತಿಗೆ ಸಹನಾ, 'ಸೊಲ್ಪ ಕಾರ್‌ನ ನಿಲ್ಸಿ' ಎಂದಿತ್ತ್. ಅಪ್ಪನೊಟ್ಟಿಗೆ ಕಾರ್ ನಿಲ್ಸಿದ ಲಾಯರ್ ಆ ಪುಟ್ಟಿ ಗೂಡೆನ ಕುರಿತು 'ಏನಾತಮ್ಮ.... ನಿನ್ನ ಹೇಸರೇನ್? ಯಾಕೆ ಹಿಂಗೆ ಅಳ್ತಾವಳಾ?' ತಾ ಪ್ರಶ್ನಿಸಿತ್. ಆದರೆ ಆಕೆ ಎಂತದರ್ರೂ ಹೇಳುವ ಸ್ಥಿತಿಲಿ ಇತ್ಲೆ. ಒಂದೇ ಸಮನೆ ಅಳ್ತಾ ಇತ್ತ್. ಅವಳ ಆ ಸ್ಥಿತಿನಕಂಡ್ ತುಂಬಾ ನೋಂದ್‌ಕಂಡ ಸಹನಾ'ಪಪ್ಪಾ..... ಇವಳ್ನ ಮನೆಗೆ ಕರ್ಕಂಡ್ ಪೋಯ' ತಾ ಹೇಳ್ತ್. ಮತ್ತೆ ಅವಳ್ನ ಮನೆಗೆ ಕರ್ಕಂಡ್ ಹೋದೋ. ರಾಯರ ಹೆಣ್ಣ್ ಸುನಂದಮ್ಮಾತ, ಇವಳು ಯಾರ್? ಯಾಕ್ ಇವುಳುನ ಕರ್ಕಂಡ್‌ಬಂದದ್, ನಿಮಗೇನಾರ್ ಹುಚ್ಚು ಹಿಡಿದುಟ್ಟಾ? ತೇಳಿ ಅಪಸ್ವರ ತೆಗ್ಗತ್. ಮನೆದ್ ಪರಿಸರ ಸ್ವಲ್ಪ ಶಾಂತ ಆದ ಮೇಲೆ ರಾಯರ್ ನಯವಾಗಿ ಹೆಣ್ಣ್‌ಗೆ ವಿವರಿಸಿದೋ. ಎಲ್ಲವೂ ಆ ಮುಗ್ಧ ಗೂಡೆನ ಕಥೆನ ಕೇಳ್ದೋ. ಅವಳ ಹೆಸ್‌ರ್‌ಕವನ. ಒಮ್ಮೆ ಅವು ಸ್ಕೂಲಿಗೆ ಹೋಗ್ತಿರಕ್ಕನ ಯಾರೋ ಅವಳ್ನ ಆಸ್ಪತ್ರೆಗೆ ಕರ್ಕಂಡೋದೋ. ಅಲ್ಲಿ ಅವಳ ಅಪ್ಪ ಮತ್ತೆ ಅಮ್ಮನ ನೋಡಿಕಾಗದ ಸ್ಥಿತಿಲಿ ಮಲ್ಗಿದ್ದೋ. ಅವರ ಆ ಸ್ಥಿತಿನ ನೋಡಿದಾಕ್ಷಣ ಕವನ ತಲೆ ತಿರ್ಗಿ ಬಿದ್ದ್‌ಬುಟ್ಟತ್. ಪ್ರಜ್ಞೆ ಬಂದ ಮೇಲೆಎದ್ದ್ ನೋಡ್ಕನ ಅಲ್ಲಿಡಾಕ್ಟ್ರ್ ಮಾತ್ರ ಇದ್ದೊ. ಅವರ ಮಾತುಕೇಳಿ ಪುಟ್ಟಿ ಕವನಂಗೆ ಈಜೀವನವೇ ಬೇಡತ ಅನ್ನಿಬುಡ್ತ್. 'ನಾನ್ ಕೈಲಿದಷ್ಟ್ ಪ್ರಯತ್ನನ ಮಾಡೊಳೆ. ಆದರೆ ವಿಧಿಯ ಮುಂದೆ ನನ್ನ ಪ್ರಯತ್ನ ವಿಫಲ ಆತ್. ನಿನ್ನ ಅಪ್ಪ ನಿನ್ನನ ಬುಟ್ಟ್ ಹೊರಟೆ ಹೋದೋಮ್ಮ.... ನಿನ್ನ ಅಮ್ಮನು ಬದುಕುವೆತ ಹೇಳಿಕೆ ಆಲೆ ತ ಹೇಳ್ದೇ ಡಾಕ್ಟರ್. ಇದರ್ನ ಕೇಳಿದ ಕವನ ತನ್ನ ಅಮ್ಮನ ತಕ್ಷಣ ನೋಡೋಕು ಅವಳೊಟ್ಟಿಗೆ ಎರಡೇ ಎರಡ್ ಮಾತಾಡೊಕು ತೇಳಿ ಓಡಿಹೋತ್. ಆದರೆ ಅವಳ ಆಸೆಂದ ಅವ್ಳು ಓಡುವಷ್ಟರಲ್ಲಿ ಅಮ್ಮ ದೇವರ ಪಾದ ಸೇರಿದ್ದೊ. ಕವನ ಅನಾಥೆಯಾಗಿ ಉಳ್ಕಂಡತ್. ಮುಂದೆ ಏನ್‌ತ ತಿಳಿಯದೇ ಬೀದಿಲಿ ನಿಂತಿದ್ದ ಕವನಾನ ರಘುನಾಥರಾಯರು ಕರೆತಂದಿದ್ದೊ. ಕವನಂದ್‌ಕಥೆ ಕೇಳಿದ ಸಹನಾ ಮತ್ತೆ ಪಪ್ಪಾ, ಇಬ್ಬರು ತಮ್ಮ ಕಣ್ಣೀರ್‌ನ ವರ್ಸಿಕಂಡ್ 'ಛೇ ಹಿಂಗೆ ಆಕಾದಿತ್ತ್. ಎಂತಹಾ ಘಟನೆ ಇದ್' ತ ಹೇಳ್ದೋ. ಆದ್ರೆ ಸುನಂದಮ್ಮ ಮಾತ್ರ ಸೊಲ್ಪ ಹೊತ್ತ್ ಗೇನ ಮಾಡಿ ಇವ್ಳು ಅನಾಥೆಯೇನೋ ನಿಜ. ಆದ್ರೇ ಇವಳ ಪಪ್ಪ, ಅಮ್ಮಂದಿರ ಸಂಬಂಧಿಕರ್ ಯಾರೂ ಇಲ್ಲೆನಾ? ತಾ ಕೇಳ್ತ್. ಕವನ ಅದನ್ನ ಕೇಳಿ 'ಇಲ್ಲೆ' ತೇಳುವಂಗೆ ತಲೆಯಾಡ್ಸಿತ್. ರಾಯರ್ ತಲೆಯಾಡ್ಸಿರೆ ಹೆಂಗೆ, ಸರಿಯಾಗಿ ಹೇಳ್‌ತ ಸಮಾದಾನಂದಲೇ ಹೇಳ್ದೊ. ' ನನ್ನ ಊರಲಿ ಅವೆಲ್ಲಾ ಒಳೊ. ಆದ್ರೆ ನನ್ನ ಪಪ್ಪ ಮತ್ತೆ ಅಮ್ಮ ಅವರೊಟ್ಟಿಗೆ ಜಗಳ ಆಡಿ ನಾನ್ ಕೂಸಾಗಿರ್ಕಕನನೇ ಇಲ್ಲಿಗೆ ಬಂದಳೊತ ತುಂಬಾ ದಿನದ್ ಹಿಂದೆ ನಂಗೆಹೇಳಿದ್ದೊ' ತೇಲ. ಕವನ ನಿರಾಶೆಲಿ. ಕವನನ ನಮ್ಮ ಪುಟ್ಟಿ ಸಂಸಾರಲಿ ಸೇರ್ಸಿಕೊಂಬದು ಬೇಡಾತ ಸುನಂದಮ್ಮ 'ಇವಳ್ನ ಪೋಲಿಸ್‌ಗೆ ಒಪ್ಪಿಸುದು ಒಳ್ಳೆದ್. ಇಲ್ಲದಿದ್ರೆ ಅನಾಥಾಶ್ರಮಕೆ ಸೇರ್ಸನಾ' ತ ಹೇಳ್ತ್. ಇದ್ರಂದ ಮೊದ್ಲೇ ನೊಂದ ಅವಳ ಮನ್ಸ್ ಹೆಂಗಾದುತೇಳ್ದರ್ನ ಗೇನ ಮಾಡ್ದರಾಯರ್ ಬೇಡಾತ ಹೇಳುವ ಧೈರ್ಯನೂ ಇಲ್ಲದೆ 'ನೋಡೋಣ' ತ ಹೇಳ್ದೇ. ಇದರ್ನ ಕೇಳ್ದ ಸಹನಾಂಗೆ ಅಯ್ಯೋ ಪಾಪ ತ ಅನ್ನಿಸಿತ್. ತಾನ್ ಆಸೆಪಟ್ಟ್ ಕರೆತಂದ ಇವಳ್ನ ಹೆಂಗೆ ಕಳ್ಸುದು ತ ಯೋಚಿಸಿ, ಅಮ್ಮ ಒಂದು ವೇಳೆ ಏನಾರ್ ಇವ್ಳು ನನ್ನ ತಂಗೆ ಆಗಿದಿದ್ದರೆ ನೀನ್ ಹಿಂಗೆನೇ ಮಾಡ್ತಾ ಇದ್ದಿರಾ? ಇವಳ್ನ ಸಾಕುದು ನಿಮಗೆ ಅಷ್ಟ್ ಕಷ್ಟನಾ? ತ ತನ್ನ ನೊಂದ ಸಣ್ಣ ಸ್ವರಂದ ಮೆಲ್ಲೆ ಉದ್ಗರಿಸಿತ್ ಸಹನಾ. ಅವಳ ಅಮ್ಮ ಅಷ್ಟೊತ್ತಿಗೆ 'ಸುಮ್ಮನಿರ್ ಅದೆಲ್ಲ ನಿಂಗೆ ಅರ್ಥ ಆದುಲೆ' ತೇಳಿ ಗದರಿಸಿ ಅವಳ ಬಾಯಿನ ಮುಚ್ಚಿಸಿತ್. ಆದ್ರೇ ಸುಮ್ಮನಿರಿಕೆ ಆಗದ ಸಹನ ತನ್ನ ಪಪ್ಪ, ಅಮ್ಮನವರೊಟ್ಟಿಗೆ ದಯವಿಟ್ಟ್ ಇವಳ್ನ ಎಲ್ಲಿಗೂ ಕಳ್ಸಬೇಡೀ, ನನ್ನಿಂದ ದೂರಮಾಡದಿರಿ ತ ಬಿಕ್ಕಿ ಬಿಕ್ಕಿ ಅತ್ತತ್. ಅವಳ ಆ ಅಳುವ ನೋಡಿ 'ಆತಮ್ಮ ಎಲ್ಲಿಗೂ ಕಳ್ಸುದುಲೆ' ತೇಳಿ ಇಬ್ಬರೂ ಅವಳ್ನ ಸಂತೈಸಿದೋ. ರಾತ್ರಿ ಎಲ್ಲವು ಮಲ್ಗಿದ್ದರೂ ಸಹನಂಗೆ ಮಾತ್ರ ನಿದ್ದೆಯೇ ಹತ್ತಿತ್ಲೆ. ಕವನಂದ್ ನೆನ್‌ಪೇ ಅವಳ್ನ ಕಾಡ್ತಾ ಇತ್ತ್. ನಂತರ ಸ್ವಲ್ಪ ಹೊತ್ತ್ ಆದ ಮೇಲೆ ಕನಸ್‌ಲಿ ತಲ್ಲೀನಳಾತ್. ಕನಸ್ ಕಳಿಯುವ ಹೊತ್ತ್‌ಲೀ ಬೆಳಕಾಗಿತ್ತ್. ಅವ್ಳು ತನ್ನ ಕೆಲ್ಸನ್ನೆಲ್ಲಾ ಮುಗ್ಸಿ ಬೇಗನೆ ಸ್ಕೂಲಿಗೆ ಹೋತ್. ನಂಗೊಬ್ಬು ಹೊಸ ಸ್ನೇಹಿತೆ ಸಿಕ್ಕಿಟೊತ ಎಲ್ಲ ಸ್ನೇಹಿತೆಯವ್ಕೆ ಹೇಳ್ತ್. ಅವೆಲ್ಲ ಅವಳ್ನ ಸ್ಕೂಲಿಗೆ ಕರ್ಕಂಡ್ ಬಾತ ಹೇಳ್ದೊ. ಸಹನಾಂಗೆ ಅವ್ಳನ ಸ್ಕೂಲಿಗೆ ಕರಂಡ್‌ಬಾಕೆ ಮನ್ಸಿದ್ರು ತನ್ನ ಪಪ್ಪಾ, ಅಮ್ಮ ಎಂತ ಹೇಳ್ಬರನೋತಾ ಕೇಳಿಳನೇ ಹೋತ್ಲೆ. ಹಿಂದೆ ಸಾಕಷ್ಟು ದಿನ ಉರುಳಿದೋ. ಮೊದ್ ಮೊದ್ಲು ಆಗೊಡೆನ ಸುನಂದಮ್ಮ ಚೆನ್ನಾಗಿಯೇ ನೋಡಿ ಕಂಬತ್ತಾ ಇತ್ತ್. ಕಾಲ ಕ್ರಮೇಣ ಆದ್ ಕಡಿಮೆಯಾಗ್ತಾ ಸಣ್ಣ ಪುಟ್ಟಿ ಕೆಲ್ಸನ್ನೆಲ್ಲ ಮಾಡೋಕು ತ ಹೇಳ್ತ್. ದಿನವು ಹಂಗೆನೇ ಹೇಳ್ತಾ ಅವಳ್ನ ತನ್ನ ಕೆಲಸದವು ತರ ಮಾಡಿಕಂಡಿತ್ ಪಾಪ, ಅವ್ಳನ್ನಾ ಹೊಡಿಯೋದು ಬಡಿಯೋದು

ಮಾಡ್ತಾ ಇತ್. ಇದನ್ನೆಲ್ಲ ನೋಡ್ತಾ ಇದ್ದ ಸಹನಾಂಗೆ ಕವನಾನ ಯಾಕಾದರ್ ಮನೆಗೆ ಕರ್ಕಂಡ್ ಬಂದೇಂತ ಅನ್ನಿಸ್‌ತಿತ್. ಹಿಂದೆ ಕಾಲ ಸರಿತಾ ಇದ್ದಂಗೆ ಥಟ್ಟನೆ ರಘುನಾಥರಾಯರಿಗೆ ಆಫೀಸ್ ಕೆಲ್ಸಲಿ ಸಾಕಷ್ಟು ಕಷ್ಟನ ಎದುರಿಸಿಕೆ ಬಾತ್. ಹಣದ ಕೊರತೆಯಾಗಿ ಆಮೇಲೆ ಅದಕ್ಕಾಗಿ ಬಂದಲಿ ಸಾಲ ಮಾಡಿ ಅದರ್ನ ತೀರಿಸಿಕೆ ಆಗದೆ ಸಾಕಷ್ಟು ತೊಂದರೆಗೆ ಸಿಕ್ಕಿ ಹಾಕಿ ಕಂಡವೆ. ನಂತರ ಏನೋ ಮಾಡಿಕಾಗದೆ ಅವರ ಮನೆನ ಜಪ್ತಿ ಮಾಡುವ ಕೆಲಸಕ್ಕೂ ಬಾತ್. ಆಗ ಸುನಂದಮ್ಮ ಕವನಾನ ಮನೆ ಬುಟ್ಟ್ ಹೋಗುವಂಗೆ ಸೂಚಿಸಿತ್. ರಾಯರ್ ಸುನಂದಮ್ಮ ಸಹನನೊಟ್ಟಿಗೆ ತಮ್ಮ ತವರ್‌ಮನೆಗೆ ಹೊರ್ಟ್ ಹೋಕೆಸಿದ್ದತೆ ನಡ್ಸಿ ಕಂಡಿದ್ದೂ. ಆ ಸಮಯಲಿ ಸಹನಾಂಗೆ ಕವನಾನ ಬುಟ್ಟ್‌ಕೊಡುವ ಮನ್ಸ್ ಇಲ್ಲದೆ ಇದ್ದು ಕೂಡ ಅವಳಮ್ಮ ಕವನಂಗೆ ದಿನನು ಕೊಡ್ತಾ ಇದ್ದ ಹಿಂಸೆನ್ನೆಲ್ಲ ನೆನೆಸಿಕಂಡ ಅವ್ಳಿಗೆ ಟಾಟಾ ಹೇಳ್ದೇ ಕ್ಷೇಮತ್ತೇಳಿ ನಿರ್ಧರಿಸಿ ಅವಳ್ನ ಅರ್ಧ ಮನಸ್ಸ್‌ಂದ ನಗುಮುಖದಿಂದಲೇ ಬೀಳ್ಕೊಟ್ಟತ್. ಕವನಂದ್ ಮುಂದಿನ ಭವಿಷ್ಯ ಹೆಂಗೆತಾ ಯೋಚಿಸದೇ ಅವರ್ನೆಲ್ಲ ತುಂಬಾ ದೊಡ್ಡ ತಪ್ಪ್‌ನ ಮಾಡ್ದೇ ತಾ ಹೇಳಿಕ್. ಕೊನೆಗೆ ಕವನ ಎಲ್ಲಿಗೆ ಹೋತು ಎಂಬುದು ಸಹನಾಂಗೆ ತಿಳಿಯದೇ ಆಗಿ ಹೋತ್. ಸಹನಾ ಅವಳ ಅಜ್ಜಿ ಅಜ್ಜನ ಮನೆಲಿ ಸಂತೋಷಂದಲೇ ಕಾಲ ತಳ್ಳಿತಾ ಇತ್. ಅವು ತನ್ನ ಬಾಲ್ಯದ ದಿನಂದಲೇ ಚುರುಕು ಬುದ್ಧಿಯವಳಾಗಿತ್. ಕವನಾನ ಭೇಟಿ ಮಾಡ್‌ದ ವರ್ಷ, ದಿನಾಂಕನ ಡೈರಿಯೊಂದರ್ಲಿ ಬರೆದಿಡಿಕೆ ಆಗೂಡೆ ಮರ್ತ್ತಿಲೆ. ಅವ್ಳು ಮೊಟ್ಟ ಮೊದಲ್ ಕವನನ ಭೇಟಿ ಯಾದಂದ್ ಇಂದ ಕೊನೆವರೆಗೆದ್ ಅನುಭವಗಳ್ನೆಲ್ಲ ಬರ್ದ್ ಅದಕ್ಕೆ ನೆನಪ್ ಎಂಬ ಹೆಸ್ರ್ ಕೊಟ್ಟಿತ್. ಆ ಸುವರ್ಣ ದಿನ ಮರಳಿ ಬಂದ್ ಕನವನಾಂದ್ ಕಡೆಗೆ ತನ್ನ ಎರಡು ಕೈಗಳ್ನ ಬಾಚಿ ಕಂಡ ಅವಳ್ನ ಅತ್ಯಂತ ಸಂತೋಷದಿಂದ ಅಪ್ಪಿ ಕಂಬಕ್ಕೆ ಹಾತೊರೆಯುತ್ತಿರುವಂಗೆ ಕನ್ಸ್ ಕಾಣ್ತಾ ಇತ್. ಸಹನಾ ಆ ಬಾಲಕೀ ಆ ದಿನ ಮರಳಿ ಬಾಕಕನ ತನ್ನ ನೆನಪ್ ಎಂಬ ಪುಸ್ತಕ ತೆರ್ದ್ ಹಾಕುದರ ಮೂಲಕ ಅದರ್ಲಿನ ವಿಷಯಗಳ್ನೆಲ್ಲ ನೆ ನ್‌ಸಿಕಂಡತ್ ಸಹನಾ. ಆ ಕವನ ಎಂಬ ಮುಗ್ಧ ಗೂಡೆ ಒಂದಲ್ಲಾ ಒಂದ್ ದಿನ ನನ್ನನ್ನ ಸೇರ್‌ದೆ ತ ದೀರ್ಘಕಾಲದ ಭರವಸೆನ ಕೂಡ ಅವ್ಳು ಹೊಂದಿತ್. ಅದ್ದಾಗಿ ತನ್ನ ಸುಖ ಸಂತೋಷದಿಂದಿರ್ಸ ಶುಭ್ರ ಮನ್ಸ್‌ನ ಬಾಗಿಲ್‌ನ ತೆರ್ಕಂಡ್ ಸದಾ ಕಾಯ್ತಾ ಇತ್ ಆ ಮುಗ್ಧ ಗೂಡೆ ಸಹನಾ. ಅವಳ ಆಕಾಂಕ್ಷೆ ಕೊನೆಗೂ ನೆರವೇರ್‌ತ್, ಕವನ ಸಿಕ್ಕಿದೆ.

ಧನ್ಯವಾದಗಳು

ಯಾಲದಾಳ್ ಜಯಲಕ್ಷ್ಮಿ ಗಿರಿಯಪ್ಪ
ದ್ವಿತೀಯ ಪಿ.ಯು.ಸಿ.,
ಮಡಿಕೇರಿ

## ಪ್ರೀತಿಯ ಸಂಪಾದಕರೇ,

ನನ್ನ ಈ ಕಥೆಯನ್ನು ಮತ್ತು ಇನ್ನೊಂದು ಕಥೆಯನ್ನು ನಿಮ್ಮ ಹಳೆಯ ವಿಳಾಸಕ್ಕೆ ಒಂದು ತಿಂಗಳು ಹಿಂದೆ ಕಳುಹಿಸಿದ್ದೇನೆ. ಆದರೆ, ನಿಮ್ಮ ಈ ಹೊಸ ವಿಳಾಸ ಸಿಕ್ಕಿದ ನಂತರ ಪುನಃ ಆ ಕಥೆಯನ್ನು ಬರೆದು ಈಗ ಕಳುಹಿಸುತ್ತಿದ್ದೇನೆ. ದಯವಿಟ್ಟು ಈ ಕಥೆ ನಿಮಗೆ ತಲುಪಿದ ನಂತರ ನಿಮ್ಮ ಕೊಡಗು ಸಂಗಾತಿ (ನಮ್ಮೆಲ್ಲರ ಪುಸ್ತಕ) ಯಲ್ಲಿ ಪ್ರಕಟಿಸಿ ಎಂದು ಕೇಳಿಕೊಳ್ಳುತ್ತೇನೆ. ಹಾಗೂ ಸಾಧ್ಯವಾದರೆ ನಿಮ್ಮ ಹಳೆಯ ವಿಳಾಸವನ್ನು ಸಂಪರ್ಕಿಸಿದರೆ ನನ್ನ ಆ ಎರಡು ಕಥೆಗಳು ನಿಮ್ಮ ಕೈ ಸೇರಬಹುದೆಂದು ನಂಬಿರುತ್ತೇನೆ. ದಯವಿಟ್ಟು ಪ್ರಯತ್ನಿಸಿ.

ನಿಮ್ಮ ಪ್ರೀತಿಯ,
ಜಯಲಕ್ಷ್ಮಿ

---

## ಪಾದದೆಡೆಗೆ

ಕಾವೇರಿಯ ಜಲ ಭೂದೇವಿಯ ವರ
ಕಡಲಲ್ಲಿ ಅಮೃತವಾದೆ ಕೊಳದಲ್ಲಿ ತೀರ್ಥವಾದೆ
ಸುಜ್ಯೋತಿ ಕನಿಕೆಯರ ಕೂಡಿ ದಿವ್ಯ ಜ್ಯೋತಿಯಾದೆ
ಭವ್ಯ ನಾಡಿದು ಕಾವೇರಿ ಜಲ ಬೀಡು,
ಬಿತ್ತಿದ್ದು ಸಸಿಯಾಯ್ತು, ನೆಟ್ಟಿದ್ದು ಬೆಳೆಯಾಯ್ತು
ಕಟ್ಟಿದ್ದು ಧಾನ್ಯವಾಯಿತು. ಕುಟ್ಟಿದ್ದು ಅಕ್ಕಿಯಾಯಿತು.
ಬೇದದ್ದು ಅನ್ನವಾಯಿತು ಉಂಡದ್ದು ಆರೋಗ್ಯವಾಯಿತು.
ತಿಂದದ್ದು ಅರಗಲು ಕೃಪೆ ನಿನ್ನದಾಯಿತು.
ವೀರ ಪರಂಪರೆಗೆ ನೀ ವರದಾಯಿನಿ
ಸೌಂದರ್ಯವತಿಗೆ ನೀ ಫಲದಾಯಿನಿ,
ಅತ್ತು ಕಾಡಿ ಬೇಡುವಗೆ ಸ್ಫೂರ್ತಿದಾಯಿನಿ
ಸತ್ತು ಹೋದವಗೆ ಸ್ವರ್ಗ ದಾಯಿನಿ
ನಾ ನಿನ್ನ ನೆನೆಯಲು ಮರತೆ
ಆಯಿತೆನಗೆ ಜ್ಞಾನ ಕೊರತೆ
ವ್ಯಥೆಯೇ ಹೃದಯದ ಚಿಂತೆ
ಹುಟ್ಟಿದಾತನು ಸಾಯಲೇ ಬೇಕು
ನಾವಲ್ಲಿವರೆಗೆ ಕಾಯಲೇ ಬೇಕು
ನಾವಲ್ಲಿವರೆಗೆ ಕಾಯಲೇ ಬೇಕು
ಕಾದು ಕಾದು ಕುದಿಯಲೇ ಬೇಕು
ಕುದಿದದ್ದು ತಣಿಯಲೇ ಬೇಕು
ನಾ ಹಾಡಿದೆ ಬೇಡಿದೆ ಕಾಡಿದೆ
ಬೇಡಿದ್ದು ಸಿಗಲೊಲ್ಲದು, ನಾ ಬಿಡಲೊಲ್ಲೆನು
ನೀಡುವವ ನೀನು ಬೇಡಲೇನಿದೆ
ನೀಡೊಂದು ವರವ ನಿನ್ನ ಪಾದವ ಪಡೆವೆ.

- ಚೇಂದ್ರಿಮಾಡ ಗ. ಮುತ್ತಪ್ಪ
ಕುಶಾಲನಗರ

## ಪ್ರಯತ್ನ ಬೇಕ್

ಪರೀಕ್ಷೆಗೆ ಕೂರವು ಪಾಸಾಕು ತ್ತೇಳಿಕಂಡ್ ಅನ್ನ ನಿದ್ದೆ ಬುಟ್ಟಕಂಡ್ ಪ್ರಯತ್ನ ಮಾಡಿವೆ. ವ್ಯಾಪಾರಿ ತನ್ನ ಲಾಭಕ್ಕಾಗಿ ರಾತ್ರಿ ಹಗ್‌ಲ್‌ತ ಇಲ್ಲದೆ ಗೈದದೆ. ವಿಜ್ಞಾನಿ ತಾನ್ ಮಾಡುವ ಶೋಧನೆಗಾಗಿ ಹೊರ ಪ್ರಪಂಚನ ಮರ್ತದೆ,. ಸುರ್‌ಲಿ ತೋಟ ಮಾಡುವಂವ ತನ್ನ ಸುಖನೆಲ್ಲ ಮರ್ತ್ ಕಷ್ಟಪಟ್ಟದೆ, ಹಿಂಗೆ ಒಬ್ಬೊಬ್ಬ ಒಂದೊಂದು ಕೆಲ್ಸಕ್ಕೆ ಲೋಕನ ಮರ್ತವೆ. ಆದ್ರೆ ನೀತಿ ನಡ್‌ತೆ, ಶೀಲ ಸಭ್ಯತ್ತೆಗೆ, ಕಷ್ಟ ಪಡುವು ಬಹಳ ಕಮ್ಮಿ. ಈ ಕಾರಣಕ್ಕನೊ ನೀತಿ, ನಡ್ತೆಗಾಗಿ ಕಷ್ಟ ಪಡ್ವಕ್ಕು ಹೋಗ್ಟ ಮನುಸನ ಯೋಗ್ಯತೆಗೆ ಬೆಲೆ ಕೊಡ್ದುಲೆ. ಅಂವನ ಬಟ್ಟೆಬರೆ ದುಡ್ಡ್‌ಗೆ ಬೆಲೆ ಕಟ್ಟಿವೆ. ಸಾಸ್ವತ ಕುಸಿ, ಮಾರ್ಗ ಕಂಡ್ ಹಿಡಿಯೋದ್ ಬುಟ್ಟ್ ದುಃಖ ಅಶಾಂತಿನ ದಾರಿ ಹಿಡಿಯದು ತಪ್ಪ್. ಶಾಶ್ವತ ಕುಷಿ ಶಾಂತಿಗಾಗಿ ಒಳ್ಳೆ ನಡ್ತೆಗೆ ಸತತ ಪ್ರಯತ್ನ ಬೇಕು.

## ನಿಧನ



ಹಾರಂಗಿ, ಅತ್ತೂರು ಗ್ರಾಮದ ಚಂಡೀರ ಬೋಜಪ್ಪನವರು ದಿನಾಂಕ 14-2-2002ರಂದು ನಿಧನರಾದರು. ಶ್ರೀಯುತರಿಗೆ 66 ವರ್ಷ ಪ್ರಾಯವಾಗಿದ್ದು ಪತ್ನಿ, ಎರಡು ಗಂಡುಮಕ್ಕಳು, ಒಬ್ಬಳು ಪುತ್ರಿಯುನ್ನು ಅಲ್ಲದೆ ಅಪಾರ ಬಂಧುವರ್ಗವನ್ನು ಅಗಲಿದ್ದಾರೆ ಎಂದು ತಿಳಿದು ಬಂದಿದೆ.

- ಸಂಗಾತಿ.

## ಒಗಟುಗಳು

1. ಚಿಕ್ಕ ಚಿಕ್ಕ ಪೆಟ್ಟಿಗೆ ಚಿನ್ನದ ಪೆಟ್ಟಿಗೆ, ಮುಚ್ಚಳ ತೆಗೆದರೆ ಮುನ್ನೂರು ಪೆಟ್ಟಿಗೆ - ಹೂ ಹಿಂಗಾರ
2. ಕುದುರೆಯಿಲ್ಲದೆ ಕೋವಿ - ಗುಡುಗು
3. ಮೂವತ್ತೆರಡು ಜನ ಸೇರಿ ಗಿಡ ನೆಟ್ಟರೆ ಒಬ್ಬ ಅದರ ಹಣ್ಣು ತಿನ್ನುತ್ತಾನೆ - ಹಲ್ಲುಗಳು ನಾಲಿಗೆ
4. ಯಾರೂ ಹತ್ತಲಾಗದ ಮರಕ್ಕೆ ಸರಗೂರು ಕರಿಯಪ್ಪ ಹತ್ತುತ್ತಾನೆ. - ಇರುವೆ
5. ಸಾಯೋವರೆಗೂ ಹೂವಿಲ್ಲ, ಹಣ್ಣು ಮಾತ್ರ ಬಿಡುತ್ತದೆ - ಅತ್ತಿ ಹಣ್ಣು
6. ಸುತ್ತ ಮುತ್ತಲೂ ಸುಣ್ಣದ ಗೋಡೆಗೆ ಎತ್ತೆತ್ತಲೂ ನೋಡಿದರೂ ಬಾಗಿಲಿಲ್ಲ - ಕೋಳಿ ಮೊಟ್ಟೆ
7. ಹಗಲೆಲ್ಲ ನಿದ್ರಿಸಿ ರಾತ್ರಿ ಕಣ್ಣು ತೆರೆಯುವನು ನಾನಾರು? ರಸ್ತೆ ದೀಪ
8. ಹಳ್ಳದೊಳಗೆ ಕುಳ್ಳ ಕುಂತವ್ನೆ - ಬಿಂದಿಗೆ
9. ಹಾವಿನ ಹಾಗೆ ಹರಿದು, ಕೊಂಬನ ಹಾಗೆ ಕೂಗಿ, ಜಂಬು ನೇರಳೆ ಮರದಂತೆ ಜಗ್ ಎಂದಿತು - ರೈಲು
10. ಹಂಚಿನ ಮೇಲೆ ಮಂಡಲದ ಹಾವು ಮಲಗಿದೆ ಪಡವಲಕಾಯಿ

- ಕೋಳುಮುಡಿಯನ ಮೋಹನ್ ಅನಂತಕುಮಾರ್,
ಗಾಳಿಬೀಡು

20ನೇ ಪುಟದಿಂದ

ದೂರವಿರಿಸುವುದು, ಧಾರ್ಮಿಕ ಕಾರ್ಯಗಳಲ್ಲಿ ಪಾಲ್ಗೊಳ್ಳದಿರುವುದು ಸಾಮಾನ್ಯ. ಇಂಥಹ ಕಾರ್ಯಗಳಲ್ಲಿ ಭಾಗವಹಿಸಿದರು ಭಯ ಅವರನ್ನು ಕಾಡುತ್ತದೆ. ವೈಜ್ಞಾನಿಕವಾಗಿ ಹೇಳುವುದಾದರೆ ಅದೊಂದು ನೈಸರ್ಗಿಕ ಕ್ರಿಯೆ, ಇಂಥಹ ಮೂಢನಂಬಿಕೆಗಳನ್ನು ಆಚರಣೆಯಲ್ಲಿಟ್ಟುಕೊಳ್ಳುವುದರಿಂದ ಮಹಿಳೆಯರು ದುಃಸ್ಥಿತಿಯಲ್ಲಿ ಬಳಲಲು ಕಾರಣವಾಗಿದೆ. ಹೆಣ್ಣು ಮಕ್ಕಳಿಗೆ ವಿವಾಹವು ತೀರಾ ಅನಿವಾರ್ಯವಿಧಿ ಎಂಬ ಭಾವನೆಯುನ್ನು ಬಿತ್ತಿ, ಕಾರಣಾಂತರದಿಂದ ವಿವಾಹ ವಂಚಿತರಾದರೆ, ಮಾನಸಿಕವಾಗಿ ಅವರನ್ನು ದುರ್ಬಲಗೊಳಿಸಲಾಗುತ್ತದೆ.

ಇಂದಿನ ಪ್ರಸಕ್ತ ಪರಿಸ್ಥಿತಿಯುಲ್ಲಿ ಗೌಡ ಮಹಿಳೆಯರು ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ತಮ್ಮ ಸ್ವಾಭಿಮಾನಕ್ಕಾಗಿ ಹೆಣಗಾಡುತ್ತಿದ್ದಾರೆ. ಅವರ ಸಮಸ್ಯೆಗಳನ್ನು ಮೆಟ್ಟಿ ನಿಂತು ಮುಂಬರಲು ಪ್ರಯತ್ನಿಸುತ್ತಿದ್ದಾರೆ. ಇಂತಹ ಸಂಕೀರ್ಣ ಪರಿಸ್ಥಿತಿಯಲ್ಲಿ ಮೌಲ್ಯಭರಿತ ವಿದ್ಯಾಭ್ಯಾಸದ ಮೂಲಕ ಒಂದು ಸುಸಂಸ್ಕೃತ ಸಮಾಜದ ನಿರ್ಮಾಣ ಆಗಲಿ ಎಂದು ಹಾರೈಸೋಣವೇ?

ವಿಳಾಸ: ಮೀನಾಕ್ಷಿ ಕೆಂ. ಎಂ., ಉಪನ್ಯಾಸಕರು,
ನೆಹರು ಸ್ಮಾರಕ ಕಾಲೇಜು, ಸುಳ್ಯ, ದ. ಕ.

ಹನಿಗವನ

## ಸಿಟ್ಟು

ನನ್ನವಳಿಗೆ ಬರುವುದು ಸಿಟ್ಟು,
ಹಿಂಗಾರಿನ ಮೋಡದಂತೆ!
ಯಾವಾಗ ಬರುವುದೊ
ಏನೊಂದು ತಿಳಿಯೆನು
ಮುಖವು ಕಪ್ಪಿಟ್ಟು,
ಕೇಳುವುದು ಗುಡುಗಿನ ಆರ್ಭಟ
ಆಗುವುದು ಕೆಲವೊಮ್ಮೆ
ಭರ್ಜರಿ ಏಟುಗಳ ಸುರಿಮಳೆ
ತೊಯ್ದು ಬುವಿಯಂತೆ
ನಾನಾಗ ಸುಮ್ಮನೆ ಮಲಗಿ ಬಿಡುವೆ!!!

- ಕಾನಡ್ಕ ಹನೀಶ್ ಅಪ್ಪಾಜಿ, ಮರಗೋಡು

# ಮಾರ್ಚ್ 31, 'ಕೊಡಗಿನ ವೀರ ಪುತ್ರ' ಜನರಲ್ ತಿಮ್ಮಯ್ಯನವರ 96 ನೇ ಹುಟ್ಟು ಹಬ್ಬ.

ತಿಮ್ಮಯ್ಯನವರು ಬೆಡಗಿನ ಬೀಡು, ಯೋಧರ ನಾಡು ಕೊಡಗು ಜಿಲ್ಲೆಯವರು. ಕೊಡಗು ಬೆಡಗಿನ ನಾಡು ಸೌಂದರ್ಯದ ನೆಲೆ ಬೀಡು. ಇಲ್ಲಿ ವಾಸಿಸುವವರು ಮುಖ್ಯವಾಗಿ ಕೊಡವರು.ಮತ್ತು ಗೌಡರು. ಮತ್ತು ಹುಟ್ಟು ವ್ಯವಸಾಯಗಾರರಾದವರು ಬೆಟ್ಟ ಗುಡ್ಡಗಳಿರುವ ತಮ್ಮ ಪ್ರದೇಶದ ನಿಸರ್ಗಕ್ಕೆ ಅನುಗುಣವಾಗಿ ಪ್ರಾಚೀನ ಕಾಲದಿಂದಲೂ ಧನುರ್ಧಾರಿಗಳು ಗಂಡು ಹುಟ್ಟಿದರೆ ಸುದ್ದಿಯನ್ನು ಗುಂಡಿನೇಟಿನಿಂದ ಸಾರುತ್ತಾರೆ. ಮಗುವಿನ ಕೈಗೆ ಬಿಲ್ಲು ಬಾಣಗಳನ್ನು ಕೊಟ್ಟೇ ಸ್ವಾಗತ ಹಾಗೆಯೇ ಮರಣವನ್ನು ಗುಂಡಿನೇಟಿನಿಂದಲೇ ಸಾರಲಾಗುತ್ತದೆ.

ಕೊಡಗಿನಲ್ಲಿ ಕೊಡೇಂದೇರ ಕುಟುಂಬವು ಶ್ರೀಮಂತ ಕುಟುಂಬಗಳಲ್ಲಿ ಒಂದು. ಈ ಮನೆತನದ ತಿಮ್ಮಯ್ಯ ಮತ್ತು ಸೀತಮ್ಮನವರಿಗೆ 1906 ಮಾರ್ಚ್31 ರಂದು ಗಂಡು ಮಗು ಹುಟ್ಟಿತ್ತು. ಮಗುವಿಗೆ ಸುಬ್ಬಯ್ಯ (ತಿಮ್ಮಯ್ಯ) ಎಂದು ಹೆಸರಿಟ್ಟರು.

### ಮೂವರು ಸೋದರರು ಸೈನ್ಯಕ್ಕೆ

ತಿಮ್ಮಯ್ಯ ಮತ್ತು ಸೀತಮ್ಮನವರಿಗೆ ಆರು ಜನ ಮಕ್ಕಳು. ಮೂವರು ಗಂಡು ಮತ್ತು ಮೂವರೂ ಹೆಣ್ಣು ಮಕ್ಕಳು. ಪೊನ್ನಪ್ಪ, ಸುಬ್ಬಯ್ಯ(ತಿಮ್ಮಯ್ಯ) ಮತ್ತು ಸೋಮಯ್ಯ, ಈ ಮೂವರು ಸಹೋದರರು ಸೈನ್ಯಕ್ಕೆ ಸೇರಿದರು. ಹಿರಿಯರಾದಪೊನ್ನಪ್ಪ ನೇತಾಜಿ ಸುಬಾಷ್ ಚಂದ್ರ ಬೋಸ್‌ರ ಆಜಾದ್ ಹಿಂದ್ ಸೈನ್ಯದಲ್ಲಿ ಕರ್ನಲ್ ಆಗಿದ್ದರು. ಕಿರಿಯ ಸೋಮಯ್ಯ ಮೇಜರ್ ಆಗಿ ಭಾರತ ಪಾಕಿಸ್ತಾನ ಯುದ್ಧದಲ್ಲಿ 1948 ರಲ್ಲಿ ಕಾಶ್ಮೀರದಲ್ಲಿ ವೀರ ಮರಣವನ್ನಪ್ಪಿದರು. ಪೊನ್ನಪ್ಪ ಮತ್ತು ತಿಮ್ಮಯ್ಯನವರು ಕಾನೂರಿನ ಸೇಂಟ್ ಜೋಸೆಫ್ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರು. ಶಿಸ್ತು ಎಂಬುದೇ ಮನುಷ್ಯನ ಜೀವನದ ಗುರಿ ಎಂಬುವುದನ್ನು ಅಲ್ಲಿಯ ಬಿಳಿಯ ಉಪಾಧ್ಯಾಯರು ಎಳೆಯ ಮಕ್ಕಳ ಮನಸ್ಸಿನಲ್ಲಿ ಮೂಡಿಸಿದರು.

### ತರಗತಿಗೊಬ್ಬನೆ ವಿದ್ಯಾರ್ಥಿ

ಪೊನ್ನಪ್ಪ ಮತ್ತು ತಿಮ್ಮಯ್ಯ ಬೆಂಗಳೂರಿನ ಬಿಷಪ್ ಕಾಟನ್ ಶಾಲೆಯಲ್ಲಿ ಪ್ರಪಥಮ ಭಾರತೀಯ ಬಾಲಕರೂ ಆಗಿದ್ದರು. ಅಲ್ಲಿನ ವಿದೇಶಿ ಮಕ್ಕಳಿಗೆ ಒಂದು ತರಹದ ಅಸೂಯೆ ಇತ್ತು. ಪ್ರಿನ್ಸಿಪಾಲರ ಭೇಟಿಯ ಸಮಯದಲ್ಲಿ ಒಬ್ಬ ವಿದ್ಯಾರ್ಥಿ ಇವರತ್ತ ಕೈ ಮಾಡಿ " ಏನೋ ನೀಗ್ರೋಗಳನ್ನು ಇಲ್ಲಿ ಸೇರಿಸುತ್ತೀರೋ?" ಎಂದು ಹೇಳಿದರು. ತಕ್ಷಣ ಪೊನ್ನಪ್ಪ ಎಡಗೈಯಿಂದ ಅವನ ಕಪಾಲಕ್ಕೆ ಸರಿಯಾಗಿ ಕೊಟ್ಟರು. ಅವನ ಸಹಾಯಕ್ಕೆ ಬೇರೆ ವಿದ್ಯಾರ್ಥಿಗಳೂ ಮುನ್ನುಗ್ಗಿದರು. ತಿಮ್ಮಯ್ಯ ಅವರನ್ನೆಲ್ಲ ಉರುಳಿಸಿದರು. ಅವರ ಆತ್ಮ ಗೌರವ ಎಲ್ಲಾ ಬಿಳಿಯ ಉಪಾಧ್ಯಾಯರಲ್ಲಿ ಮತ್ತು ಪ್ರಿನ್ಸಿಪಾಲರಲ್ಲಿ ಅಭಿಮಾನ ಹುಟ್ಟಿಸಿತು.

ತಿಮ್ಮಯ್ಯನವರು ಬಿಷಪ್ ಕಾಟನ್ ಶಾಲೆಯ ವಿದ್ಯಾಭ್ಯಾಸವನ್ನು ಮುಗಿಸಿದಾಗ ಅವರಿಗೆ 16 ವರ್ಷ ವಯಸ್ಸಾಗಿತ್ತು. ಎಳೆಯ ಮನಸ್ಸು ಸೈನ್ಯಕ್ಕೆ ಸೇರಲು ಬಯಸಿತು.

### ಸೈನ್ಯ ಸೂಜಿಗಲ್ಲು

ತಿಮ್ಮಯ್ಯನವರು ರಾಯಲ್ ಇಂಡಿಯನ್ ಮಿಲಿಟರಿ ಶಾಲೆಗೆ ಸೇರಿದರು. ತರಬೇತಿಯು ಇಂಗ್ಲೆಂಡಿನ ಸ್ಯಾಂಡ್ ಹರ್ಸ್ಟ್ ಎಂಬಲ್ಲಿ ನಡೆಯಿತು. ಬ್ರಿಟಿಷ್ ಸಾಮ್ರಾಜ್ಯದ ಎಲ್ಲಾ ಭಾಗಗಳ ಅಧಿಕಾರಿಗಳಿಂದ ಯುವಕ ತಿಮ್ಮಯ್ಯನವರು ಉತ್ತಮ ಪ್ರಶಂಸೆಗಳನ್ನು ಪಡೆದು ಭಾರತಕ್ಕೆ ಮರಳಿದರು.

ತಿಮ್ಮಯ್ಯನವರು ಸೆಕೆಂಡ್ ಲೆಫ್ಟಿನೆಂಟ್ ತಿಮ್ಮಯ್ಯ ಆದರು. ಬೆಂಗಳೂರಿನ ಹೈಲೆಂಡ್ ಲೈಟ್ ಇನ್ ಫೆಂಟ್ರಿ ದಳಕ್ಕೆ ಸೇರಿದರು. ಇದು ಸ್ಕಾಟ್ಲೆಂಡಿನವರ ದಳ. 1927 ರಲ್ಲಿ ತಿಮ್ಮಯ್ಯನವರಿಗೆ ಹೈದರಾಬಾದ್ ರೆಜಿಮೆಂಟಿಗೆ ವರ್ಗವಾಯಿತು. ಅಲ್ಲಿಂದ ಅವರಿ ಬಾಗದಾದಿನಲ್ಲಿ ಸೇವೆಯನ್ನು ಸಲ್ಲಿಸಿ ಭಾರತಕ್ಕೆ ಮರಳಿದರು. ಭಾರತದಲ್ಲಿ ಬ್ರಿಟಿಷರಿಗೆ ವಿರೋಧ ಗಾಢವಾಗಿ ಬೆಳೆಯುತ್ತಿತ್ತು. ಭಾರತದ ಸ್ವಾತಂತ್ರ್ಯ ಸಂಗ್ರಾಮ ನಾಯಕರಿಗೆ ಬ್ರಿಟಿಷ್ ಸೈನ್ಯದಲ್ಲಿ ಸೇವೆ ಮಾಡುತ್ತಿದ್ದ ಭಾರತೀಯರಿಗೆ ಇದೊಂದು ಸಂಕಟದ ಕಾಲವಾಗಿತ್ತು. ಬ್ರಿಟಿಷ್ ಸರಕಾರಕ್ಕೆ ನಿಷ್ಠೂರಾಗಿರಬೇಕಾಗಿತ್ತು. ಒಂದು ದಿನ ತಿಮ್ಮಯ್ಯನವರನ್ನು ಜವಹರ್ ಲಾಲ್ ನೆಹರೂರವರ ತಂದೆ ಮೋತಿಲಾಲ್ ನೆಹರೂರವರು ಬ್ರಿಟಿಷ್ ಸೈನ್ಯದ ಉಡುಪು ಧರಿಸಿದ ಭಾರತೀಯನಿಗೆ ಏನೆನಿಸುತ್ತದೆ ಎಂದು ಕೇಳಿದರು. ತಿಮ್ಮಯ್ಯನವರು ತಾವು ತಾಯ್ನಾಡಿನ ಸ್ವಾತಂತ್ರ್ಯಕ್ಕಾಗಿ ಸೇವೆ ಸಲ್ಲಿಸಲು ರಾಜಿನಾಮೆ ಕೊಡುವುದಾಗಿ ಹೇಳಿದರು. ಆಗ ನಿಮ್ಮಂತಹ ಯೋಧರು ನಮಗೆ ಬೇಕು ಸೈನ್ಯದಲ್ಲಿದ್ದು ಅನುಭವ ಪಡೆಯಿರಿ ಎಂದರು.

### ನೀನಾ ಬಾಳ ಸಂಗಾತಿ

ತಿಮ್ಮಯ್ಯನವರು 1932 ರಲ್ಲಿ ಕ್ಯಾಪ್ಟನ್ ಪದವಿಗೇರಿದರು. ಕ್ವೆಟಾದಲ್ಲಿದ್ದಾಗ 18 ವರ್ಷದ ನೀನಾ ಎಂಬುವರನ್ನು ಮದುವೆಯಾದರು. 1935 ರಲ್ಲಿ ಖಿಃಖ 90 ಕ್ವೆಟಾ ದಲ್ಲಿ ಭಾರೀ ಭೂಕಂಪವಾಯಿತು. ಈ ದಂಪತಿಗಳು ಭೂಕಂಪದಲ್ಲಿ ಮಡಿದವರನ್ನು ತಾವೇ ಸ್ವತಃ ತಮ್ಮ ಕೈಗಳಿಂದ ಲಾರಿಗಳಲ್ಲಿ ತುಂಬಿಸಿ ಅಂತ್ಯಕ್ರಿಯೆ ನಡೆಸಿದರು. ಇದೇ ತಿಮ್ಮಯ್ಯದಂಪತಿಗಳಿಗೆ

ಮಧುಚಂದ್ರವಾಯಿತು ಈ ದಂಪತಿಗಳ ಅಪಾರ ಸೇವೆಯನ್ನು ಬ್ರಿಟಿಷ್ ಸರಕಾರ ಮೆಚ್ಚಿ ನೀನಾಳಿಗೆ ಕೈಸರ್-ಇ- ಹಿಂದ್ ಬಿರುದನ್ನು ಕೊಟ್ಟಿತ್ತು.

1945 ರಲ್ಲಿ ತಿಮ್ಮಯ್ಯನವರು ಬರ್ಮಾಕ್ಕೆ ಹೊರಟರು. ಅಲ್ಲಿ ಅವರ ವಿಶೇಷ ಸೇವೆಯನ್ನು ಮೆಚ್ಚಿ ಬ್ರಿಗೇಡಿಯರ್ ಹುದ್ದೆಗೆ ಏರಿಸಿದರು.

ಸ್ವಾತಂತ್ರ್ಯ ಪಡೆದು 2 ತಿಂಗಳಲ್ಲಿ ಪಾಕಿಸ್ಥಾನ ಯುದ್ಧ ಆರಂಭವಾಯಿತು. ಕಾಶ್ಮೀರ ಅಪಾಯದ ದವಡೆಯಲ್ಲಿತ್ತು. ಭಾರತ ಸರಕಾರ ಸೇನೆಯನ್ನು ಕೆ. ಎಂ. ಕಾರ್ಯಪ್ಪ, ಕಲ್ವಂತ್ ಸಿಂಗ್ ಮತ್ತು ತಿಮ್ಮಯ್ಯನವರ ಮುಂದಾಳತ್ವದಲ್ಲಿ ಕಾಶ್ಮೀರಕ್ಕೆ ಕಳುಹಿಸಿತು. ತಿಮ್ಮಯ್ಯನವರು 19 ಸಾವಿರ ಅಡಿ ಎತ್ತರದಲ್ಲಿ ಅಮ್ಲಜನಕವಿಲ್ಲದೆ ವಿಮಾನದಲ್ಲಿ ಹೋಗಿ ಸೈನಿಕರಿಗೆ ಆಯುಧಗಳನ್ನು ಆಹಾರ ಪೊಟ್ಟಣಗಳನ್ನು ಒದಗಿಸಿದರು. ಕಠಿಣ ಚಳಿಗಾಲದಲ್ಲಿ ತಮ್ಮ ಜೀವದ ಆಸೆಯನ್ನು ಮರೆತು ವೀರಾವೇಶದಿಂದ ಸೈನಿಕರೊಡನೆ ಹೋರಾಡಿದರು ಕಾಶ್ಮೀರದ ಜನತೆ ತಿಮ್ಮಯ್ಯನವರನ್ನು ವೀರ ಪುರುಷನೆಂದು ಕೊಂಡಾಡಿದರು.

ಬರ್ಮ ಕಾಶ್ಮೀರ, ಯುದ್ಧಗಳಿಂದ ಇವರ ಖ್ಯಾತಿ ಪ್ರಪಂಚದಲ್ಲಿ ಹಬ್ಬಿತು. ನಂತರ ತಿಮ್ಮಯ್ಯ ಮತ್ತು ಕಾರ್ಯಪ್ಪ ಸೇನಾಧಿಕಾರಿಗಳ ಕಾಮನ್‌ವೆಲ್ತ್ ಕೂಟಕ್ಕೆ ಇಂಗ್ಲೆಂಡಿಗೆ ಹೋದರು. ಬ್ರಿಟಿಷ್ ಅಧಿಕಾರಿಗಳು ಇವರಿಬ್ಬರ ಸೇವೆಯನ್ನು ಹೆಮ್ಮೆಯಿಂದ ಕೊಂಡಾಡಿದರು. ತಿಮ್ಮಯ್ಯನವರು 1953 ರಲ್ಲಿ ಲೆಫ್ಟಿನೆಂಟ್ ಜನರಲ್ ಆದರು.

### ಕಬ್ಬಿಣದ ತೀರ್ಪುಗಾರ

ಎರಡನೇ ಮಹಾಯುದ್ಧದ ಸಮಯದಲ್ಲಿ ತಿಮ್ಮಯ್ಯನವರು ತೋರಿಸಿದ ಪರಾಕ್ರಮಕ್ಕಾಗಿ ಅಮೆರಿಕಾ ಸರಕಾರ ಅವರನ್ನು ಕಬ್ಬಿಣದ ತೀರ್ಪುಗಾರ ಎಂದು ಕರೆಯಿತು. ರಾಜಾಜಿಯವರು ಸೈನ್ಯಕ್ಕೆ ಋಷಿ ಎಂದು ಕರೆದರು. ಭಾರತ ಸರಕಾರವು ತಿಮ್ಮಯ್ಯನವರಿಗೆ ಪದ್ಮಭೂಷಣ ಪ್ರಶಸ್ತಿ ನೀಡಿತು.

1957 ರಲ್ಲಿ ಜನರಲ್ ಪದವಿಯನ್ನು ಪಡೆದರು. ಇಥಿಯೋಪಿಯಾದಲ್ಲಿ ಮಿಲಿಟರ್ ಅಕಾಡೆಮಿಯ ಸಮಾರಂಭದಲ್ಲಿ ಅಲ್ಲಿನ ಚಕ್ರವರ್ತಿಗಳು ತಿಮ್ಮಯ್ಯನವರನ್ನು ಸನ್ಮಾನಿಸಿದರು. 1960 ರಲ್ಲಿ ನೇಪಾಳದಲ್ಲಿ ರಾಜರು ಅವರ ದೇಶದ ಗೌರವ ಸೇನಾಧಿಕಾರಿಯಾಗಿ ಆರಿಸಿದರು. ತಿಮ್ಮಯ್ಯನವರ ಉಡುಪು ಮೆಡಲ್, ಬಹುಮಾನಗಳು ಅವರ ಭಾವಚಿತ್ರಗಳನ್ನು ನಾವು ಇಂದೂ ನೋಡಬಹುದು.

### ವಿಶ್ವ ಸಂಸ್ಥೆಗೆ ಧೀರ

ತಿಮ್ಮಯ್ಯನವರು ದೇಶಕ್ಕೆ ಅ ಮೋಘ ಸೇವೆ ಸಲ್ಲಿಸಿ 1961 ರಲ್ಲಿ ಸೇನೆಯಿಂದ ನಿವೃತ್ತರಾದರು. ನಂತರ ಕಾಫಿ ಬೆಳೆಗಾರ ಸಂಘದ ಉಪಾಧ್ಯಕ್ಷರಾಗಿದ್ದರು. 1964 ರಲ್ಲಿ ವಿಶ್ವ ಸಂಸ್ಥೆಯ ಸೇನಾಧಿಕಾರಿಯಾಗಿ ನೇಮಕ ಗೊಂಡರು. 1965 ಡಿಸೆಂಬರ್ 18 ನೇ ತಾರೀಖು ವೀರ ಪುತ್ರ ತಿಮ್ಮಯ್ಯನವರು ಹೃದಯಾಘಾತದಿಂದ ಸೈಪ್ರಸ್ ದೇಶದಲ್ಲಿ ನಿಧನರಾದರು.

ಇಡೀ ಭಾರತದ ಜನತೆ ಈ ವಾರ್ತೆಯಿಂದ ದುಃಖದಲ್ಲಿ ಮುಳುಗಿತು. ಇವರ ದೇಹವನ್ನು ವಿಶ್ವ ಸಂಸ್ಥೇಯ ವಿಮಾನ'ದಲ್ಲಿ ಭಾರತಕ್ಕೆ ತರಲಾಯಿತು. ಸೈಪ್ರಸ್ ಸರಕಾರ 1966 ಜೂನ್ 6 ರಂದು ತಿಮ್ಮಯ್ಯನವರ ನೆನಪಿಗಾಗಿ ಅಂಚೆ ಚೀಟಿಯನ್ನು "ಸನ್ ಆಫ್ ಇಂಡಿಯಾ" ಎಂದು ಕರೆದು ಪ್ರಕಟಿಸಿತು.

---

## "ನಮ್ಮ ನಾಡು"

ನಮ್ಮ ನಾಡಿದು ನಮ್ಮದು
ಕೊಡಗು ಹೆಮ್ಮೆಯ ನಾಡಿದು
ವೀರ ಶೂರರು ಜನಿಸಿದ ನಾಡಿದು
ಇಗ್ಗುತಪ್ಪನು ನೆಲೆಸಿದ ಬೀಡಿದು
ಕಾವೇರಿ ಹರಿಯುವ ಪುಣ್ಯ ಭೂಮಿಯಿದು
ಭತ್ತ ಬೆಳೆಯುವ ಹೊನ್ನಾಡುವಿದು
ಯಾಲಕ್ಕಿ ಬೆಳೆಯುವ ಫಲ ಭೂಮಿಯಿದು
ಕಾಫಿ ಬೆಳೆಯುವ ಸಿರಿನಾಡುವಿದು.
ಹಸಿರು ಗಿರಿ ಬನಗಳ ತಾಣವಿದು
ಕಿತ್ತಳೆ ಬೆಳೆಯುವ ಸಿಹಿ ನಾಡು ಗಂಧ
ಶ್ರೀಗಂಧಗಳ ಸುಗಂಧ ನಾಡಿದು
ವನ್ಯ ಮೃಗಗಳ ಸುಂದರ ಬೀಡಿದು
ಬೆಟ್ಟ ಗುಟ್ಟಗಳ ಸಾಲಿದು
ಗೌಡ ಜನರು ನೆಲೆಸಿದ ಬೀಡಿದು
ಕವಿ ಮುನಿಗಳು ಜನಿಸಿದ ಬೀಡಿದು
ಸಂಗೀತಾ ಸೊಂಪನ್ನು ಬೀರಿದ ನಾಡಿದು
ವಿದ್ಯಾವಂತರು ನೆಲೆಸಿದ ನಾಡಿದು
"ಸಂಗಾತಿ "ಓದುಗರ ಬೀಡಿದು
ನಮ್ಮ ನಾಡಿದು ನಮ್ಮದು ಕೊಡಗು
ಹೆಮ್ಮೆಯ ನಾಡಿದು.

- ಎಡಿಕೇರಿ ಜಗ್ಗ ಬಲ್ಲಮಂಚಿ

---

### ಚಾಂಪ

ಸೀರಿಯಸ್‌ತ ಗೊತ್ತಾದರು ಚಾಮವ್ವ
ಸುಮ್ಮನೆ ಇದ್ದದ್‌ರ ಕಂಡ್ ನೆರೆಯಂವ ಕೇಳ್ತ್
"ಇದೇನ್ ಇಲ್ಲೆ ಒಳ ಅಲ ಚಾಂಪಂಗೆ
ಸೀರಿಯಸ್ಸ್ ಗಡ ಹೋಗಿ ನೋಡು ಆಸ್ಪತ್ರೆಲಿ ಉಟ್ಟುಗಡ.
"ಒಂದ್ ದಿನನು ಜೀವನಲಿ ಸೀರಿಯಸ್ಸಾಗಿ ತಕಣದಂವ ಇಂದ್
ಸೀರಿಯಸ್ಸಾಗಿ ಕಳಿಯಲಿ, ಯಾಗೋಳು
ತಮಾಸೆ ಒಳ್ಳದಲ್ಲ ತೇಳಿಕಂಡ್ ಹಂದಿಗೆ ಹೊಯ್ಯಕೆ ಎದ್ದತ್

- ಕುಟ್ಟನ ದೀಪಕ್‌ಸೋಮಯ್ಯ ಬೆಂಗಳೂರು

# ಗೌಡ ಸಂಸ್ಕೃತಿ : ಭಾಷೆ ಮೊದ್ಲು

ಕೊಡ್‌ಗ್‌ಗೆ ಗೌಡರ್ ಹೆಂಗೆ ಬಂದ್ ನೆಲ್ಸಿ ದೊತ್ತೇಳ್ದಕ್ಕೆ , ಬ್ಯಾರೆ ತರದ ಕತೆ ಉಟ್ಟು. ವಿದ್ವಾಂಸರ್, ಸಾಹಿತಿಗ, ಒಂದೊಂದು ರೀತಿಲಿ ಕೊಡ್‌ಗ್ ಚರಿತ್ರೆನ ಬರ್ದೊಳೋ, ಇದ್ನ ನೋಡ್ರೇ ನಮಿಗೆ 500 ವರ್ಷದ ಇತಿಹಾಸ ಉಟ್ಟುನ್ತಾ ಗೊತ್ತಾದೆ. ಈಗ ಈ ಪುರಾಣನ ಕಟ್ಟೆಕ್ಕಂಡ್ ನಮಿಗೇನಾಕು. ಹೆಂಗೂ ನಾವೆಲ್ಲ ಕೊಡ್‌ಗಲಿತ್ತಾನೆ ಹುಟ್ಟಿದೆವು. ನಾವು ಹಿಂದೆ ಹೆಂಗೆ ಇದ್ದೊ, ಈಗ ಹೆಂಗೆ ಒಳೊ, ಮುಂದೆ ಹೆಂಗೆ ಇರಕ್ಕಾದೆತೇಳ್ವ ವಿಷ್ಯದ ಬಗ್ಗೆ ಸ್ವಲ್ಪ ಚಿಂತಿಸಕ್ಕಾದೆ. ಮತ್ತೆ ಅವು ಜೀವನ ಮಾಡ್‌ಕನ ನಮ್‌ಗೊಂದು ಸಂಸ್ಕೃತಿತ್ತೇಳ್ದು ಇದ್ದದಲೆ, ಅದೇ ಸಂಸ್ಕೃತಿನ ಮೊದಲ್‌ನೆ ವಿಷ್ಯನೇ ನಾವಾಡುವ ಭಾಷೆ ಅರೆ ಗನ್ನಡ ಭಾಷೆ (ನಡುಗನ್ನಡ) ಇದ್ ನಮ್ಮ ತಾಯಿ ಭಾಷೆ!

ಇದೊಂದ್‌ಲಾಯಕ್ಕಾದ ಭಾಷೆ. ಪ್ರತಿಯೊಂದು ಜನಾಂಗ ಮುಂದುವರ್ದ್ ಸಂಸ್ಕೃತಿ ಉಳಿಯಕ್ಕುತ್ತಾದ್ರೆ, ಅದ್‌ಕೆ ಭಾಷೆನೆ ಮೂಲ. ಭಾಷೆಯಿಲ್ಲದಿದ್ದರೆ ನಾವ್ ಏನ್ ಮಾಡಿಕ್ಕಾದೆ. ಪ್ರಾಣಿಗಳು ಇರಕ್ಕಾದೆ ಅಷ್ಟೇ! ಆದ್ರಂದ ನಮ್ಮ ಸುಂದರ ಭಾಷೆನ ಬೆಳ್ಸಿ ಉಳೋಕ್ಕುತ್ತಾದ್ರೆ ಏನ್ ಮಾಡಕು. ನಾವೆಲ್ಲವು ಪರಸ್ಪರ ಕಾಂಬಕ್ಕನ ಅರೆ ಭಾಷೆಲಿ ಮಾತಾಡ್ದುಲೆ. ಈ ಭಾಷೆನ ನಮ್ಮಲ್ಲಿಎಸ್ಟ್ ಮಂದಿ ಮಾತಾಡ್ಕೆ ಬಾಕಿದ್ದವು ಯಾಕೆ? ನಮ್ಮ ಭಾಷೆ ಮಾತಾಡ್ಕನ ನಾಚಿಕೆಯಾದೆನ! ಕಷ್ಟಾದೆನ! ಇಲ್ಲೆ ಅಸಹ್ಯಯಾದೆನ! ಅಲ್ಲಾ ಮುಜುಗರಾದೆನಾ! ಕೆಲವುಕ್ಕಾದು! ಮತ್ತೆ ನಾಕ್‌ಜನ ಸೇರ್ದಲ್ಲಿ ಪಿಸ್ ಪಿಸ್‌ತ್ತೇಳಿ ಬ್ಯಾರೆ ಭಾಷೆ ಮಾತಾಡ್ದು. ಗೊತ್ತಿಲ್ಲದವರೊಟ್ಟಿಗೆ ಪರ್ವಾಗಿಲ್ಲೆಪ. ಭಾಷೆ ಗೊತ್ತಿದ್ದವರೊಟ್ಟಿಗೆ ಲಾಯಕ್ಕ ಮಾತಾಡ್ಕೆ ಇವುಕೆ ಏನ್ ಕೇಡ್! ಗೌಡರಾಗಿ ಹುಟ್ಟಿ ಅರೆಭಾಷೆ ಬಾಡ್ಲೆತ್ತೇಳ್‌ರೆ ಅವುಕ್ಕೇನ್ ಹೇಳೋಕ್ಕುತ್ತೇಳ್ತಿ ನೀವೇ ಹೇಳಿ, ಇವುಕೆ ಬುದ್ಧಿ ಇಲ್ಲೇತ್ತೇಳಕ್ ಮತ್ತೇ ಸ್ವಾಭಿಮಾನ ಇಲ್ಲದವುಸ. ಇವು ಬ್ಯಾರೆ ಭಾಷೆ ಮಾತಾಡ್ತ ಇರು ಮರ್‍ತೋಗುಟ್ಟಾ! ನಮಿ ಗೆ ನಮ್ಮ ಭಾಷೆ ಮೇಲೆ ಅಭಿಮಾನ ಇಲ್ಲೆ ಆದ್ರೆ ಬ್ಯಾರೊಂದು ಭಾಷೆ ಮೇಲೆ ಎಂತ ಅಭಿಮಾನ! ಎಂತ ವಿಪರ್ಯಾಸ ಇದ್ಕೆ ಭಾಷಾ ಪ್ರೇಮ ಇಲ್ಲಿ ನಾವ್ ಹೆಂಗೆ ಕೆಲವು ಇತರ ಪ್ರಾದೇಶಿಕ ಭಾಷೆಗಳ್ನ ಕಲ್ತ್ ಮಾತಾಡುವೆ. ಹಂಗೇನೆ ಬ್ಯಾರೆವುಸಾ ನಮ್ಮ ಭಾಷೆನ ಮಾತಾಡಕು. ಹಂಗಾಕ್ಕನ ನಮ್ಮ ಭಾಷೆ ಬೆಳೆಯಕ್ಕೆ ಅನೂಕೂಲಾದೆ. ಈಗ ಪತ್ರಿಕೆ ನಮಿಗೆ ಬಾರಿ ಉಪಕಾರ ಮಾಡಿ, ಲೇಖನ ಬರೆಯೊದರೊಟ್ಟಿಗೆ ಎಲ್ಲಾ ಜನಾಂಗಕ್ಕೂ ನಮ್ಮ ಅರೆಭಾಷೆ ನ ಓದ್‌ಕೆ ಅವಕಾಶ ಮಾಡಿ ಕೊಟ್ಟುಟು. ಈ ಅವಕಾಶನ ಎಲ್ಲವೂ ಉಪಯೋಗ್ಸಿಕಣಕು. ಇದೇ ರೀತಿ ಮುಂದುವರ್ದ್ ನಮ್ಮ ಭಾಷೆ ಅತೀ ಎತ್ತರಕ್ಕೆ ಬೆಳೆಯಕು. ಇದ್ ಕೊಡಗ್ ಜಿಲ್ಲೆಲಿ ಆಡ್ ಭಾಷೆ ನಾಡ್‌ಭಾಷೆ ಆಕು. ಭಾಷಾ ಸಂಸ್ಕೃತಿ ಎಲ್ಲೆಡೆ ಹರಡಕು. ಪ್ರತಿಯೊಬ್ಬನು ನಮ್ಮ ಭಾಷೆನ ಪ್ರೀತ್ಸ್‌ವಂತಾಕು. ಹಂಗೆ ಇದ್ ತನ್ನ ತನ ಗುರ್ತಿಸಿಕಂಡ್ ಆಕಾಶವಾಣಿ, ದೂರದರ್ಶನಲಿ ಪ್ರಸಾರಕ್ಕೆ ಕೆಲವು ಕಾರ್ಯಕ್ರಮಗಳ್ನ ನಮ್ಮ ಭಾಷೆಲಿ ನೀಡ್‌ವಂತಾಕು. ಕೊಡ್‌ಗ್‌ನ ಸಂಸ್ಕೃತಿಲಿ ನಮ್ಮ ಸಂಸ್ಕೃತಿ ಬೆರೆಯಕು. ಆಗ ಕೊಡ್‌ಗ್‌ತೇಳ್ದ್, ವಿಶಿಷ್ಟ ಜನಾಂಗದ ವೈವಿಧ್ಯಮಯ ಸಂಸ್ಕೃತಿ ಹೊಂದಿದ್ದ ಜಿಲ್ಲೆತ್ತೇಳ್ದು ದೇಶ ವಿದೇಶಕ್ಕೆ ಗೊತ್ತಾಕು. ಗೌಡ ಜನಾಂಗಕ್ಕೆ ಎಂತಹ ಶ್ರೀಮಂತ ಭಾಷೆ ಉಟ್ಟುತ್ತೇಳ್ದು ಪ್ರತಿಯೊಬ್ಬಂಗೆ ಮನವರಿಕೆಯಾದೆ. ಇದ್ರಿಂದ ನಮ್ಮೊಳಗೆ ಸೌಹಾರ್ದ ಯುತದ ವಾತಾವರಣ ಬೆಳಿಯಕ್ಕೆ ಕಾರಣಾದೆ. ಜನ್ರಲಿ ಶಾಂತಿ ನೆಲ್ಸಿದೆ. ಪರಸ್ಪರ ಪ್ರೀತಿ ವಿಶ್ವಾಸ ತುಂಬಿದೆ. ಜಾತೀಯತೆ ತೊಲಗಿದೆ. ಸಹಬಾಳ್ವೆಗೆ ನಾಂದಿಯಾದೆ. ಆಗ ಗಂಡ್ ಹೆಣ್ಣ್‌ತ್ತೇಳ್ವ ಎರಡ್ ಜಾತಿತ್ತೇಳ್ದು ನಮ್ಮ ಹೃದಯಲಿ ಬೇರೂರ್‍ದೆ. ಇಂತ ಭವಿಷ್ಯದ ಕನ್ಸ್ ನನ್ಸಾಕೆ ನಾವೆಲ್ಲ ಸಮಾನ ಮನ್‌ಸಿಂದ ಸ್ಥಳೀಯ ಭಾಷೆಗಳ್ನ ಕಲ್ತ್, ಪರಸ್ಪರ ಮಾತಾಡ್ಕಂಡ್, ಸರ್ವಭಾಷೆನ ಬೆಳ್ಸ್‌ಕೆ ಪ್ರಾಮಾಣಿಕದ ಪ್ರಯತ್ನ ಮಾಡಕು ಮತ್ತೆ ಭಾಷಾಭಿಮಾನನ ಇಟ್ಕಣಕುತ್ತೇಳಿ ಹಾರೈಸಿನೆ. ಹಂಗೆ ನಮ್ಮ ಭಾಷೆ 'ಅರೆ ಭಾಷೆ' ನ ಉದ್ಧಾರ ಮಾಡ್‌ಕೆ ಒದ್ದಾಡಿಕಂಡ್ ಪೇಚಾಡ್ತುರುವ ಭಾಷಾಭಿಮಾನಿಗಳಿಗೂ ನನ್ನ ಹೃದಯ ಪೂರ್ವಕ ವಂದನೆಗ.

**ಅರೆ ಗನ್ನಡ ಭಾಷೆ ಸರ್ವರಭಾಷೆಯಾಗಲೀ**

**- ಗುಡ್ಡೆಮನೆ ರಮೇಶ್, ಮಡಿಕೇರಿ.**

## ಕವನ

ಓ ನನ್ನ ಗಣಪತಿ
ನಿನಗೆ ನನ್ನ ಆರತಿ
ನಾನು ಬಾರಿ ದಪ್ಪ
ಜಗಕ್ಕೆ ಎಲ್ಲಾ ಅಪ್ಪ

ಕಾಡಿನ ಎಲ್ಲಾ ಆನೆ
ನಿನ್ನ ಸೊಂಡಿಲು ಆನೆ
ನೀನು ಓದಲು ಕಲಿ
ನಿನ್ನ ಸ್ನೇಹಿತ ಇಲಿ

ನಿನಗೆ ಲಡ್ಡು ಅಂದರೆ ಇಷ್ಟ
ನನಗೆ ದುಡ್ಡು ಅಂದರೆ ಕಷ್ಟ
ನಮ್ಮ ತಂದೆ ಮುಂದೆ
ನಾನು ಅವರ ಹಿಂದೆ

ನನ್ನ ಗಣಪತಿಯ ಹೊಟ್ಟೆ
ಹಣ್ಣು-ಹಂಪಲು ಇಡುವುದು ತಟ್ಟೆ
ಗಣಪತಿ ತಿನ್ನುವುದು ಹಣ್ಣು
ಜಗತ್ತನ್ನು ನೋಡುವುದು ಕಣ್ಣು

ನಾನು ನೀ ಇರುವುದು ಮಣ್ಣು
ಭೂಮಿಯಲ್ಲಿ ಇರುವುದು ಮಣ್ಣು

- ಕೆ. ಪುರುಷೋತ್ತಮ ಸದಾನಂದ
ಗಾಳೀಬೀಡು.

# ಮೂಢನಂಬಿಕೆ

ಒಂದು ಹಳ್ಳಿಲಿ ಒಂದು ಸಣ್ಣ ಮನೆ ಇತ್ತ್. ಆ ಮನೆಲಿ ಶಿವಪ್ಪ ಮತ್ತೆ ಅವನ ಮಂಜ ರವಿ ಇಬ್ಬೊರೇ ಇರ್ದ್ದು. ಒಂದು ದಿನ ರವಿ ಇಸ್ಕೂಲ್‌ಗೆ ಪಾಸ್‌ಫೈಲ್ ನೋಡಿಕೆ ಹೋತ್, ಅವ ಪಾಸ್ ಆವುಟು. ದಾರಿಲಿ ಬಾರಾಕನ ಬೊಬ್ಬೆ ಹಾಕಂಡ್ ಬಾತ್, ಅಪ್ಪ ನಾನ್ ಪಾಸ್‌ಂತ ಹೇಳ್ತ್, ಆಗ ಅಪ್ಪ ಕೇಳ್ತ್. ಆಚೆ ಮನೆ ನೀಲಕ್ಕನ ಮಗ್ಳ ಪಾಸ್ ಆವುಟಾಂತ. ಆಗ ರವಿ ಅವ್ಳ ಫೈಲ್ ಅಂತ ಹೇಳ್ತ್. ಆಗ ಶಿವಪ್ಪ ರವಿನೊಟ್ಟಿಗೆ ನಿಂಗೆ ದಾರಿಲಿ ಬಾಕಾಕನ ಯಾರಾರ್ ಸಿಕ್ಕಿದನ ಅಂತ ಕೇಳ್ತ್ ಆಗ ರವಿನಾ ಶಾಲೆಗೆ ಹೋಕನ ದಾರಿಲಿ ಒಂದು ಕಲ್ಲ್‌ನ ಡಂಕಿ "ಡಂಕಿ" ಅಂತ ಎಡ್‌ಗಿ ಬಿದ್ದೆ. ಆಗ ನೀಲಕ್ಕ ಸಿಕ್ಕಿದೊ. "ನೀನ್ ಪಾಸ್ ಅಂತ ಕೇಳ್ದೊ" ಅಂತ ಹೇಳ್ತ್, ಅಷ್ಟೊತ್ತಿಗೆ ಶಿವಪ್ಪ ಅವ್ಳ ದೊಡ್ಡ ಮಾಟಗಾರ್ತಿಂತ ಹೇಳ್ತ. ಆಗ ರವಿಗೆ ತುಂಬಾ ಸಿಟ್ಟ್ ಬಾತ್. ಸುಮ್ಮನೆ ಕೂರಪ್ಪ ನಿನ್ನ ಮೂಢನಂಬಿಕೆ ನಿಂಗೆ ಹಾಳ್, ಅಪ್ಪ ನಂಗೆ ಸುಸ್ತು ಆವುಟ್ ನಾ ಮಲ್‌ಗಿನೆ ತ ಹೇಳ್ತ್. ಮತ್ತೆ ಶಿವಪ್ಪ ಮಲಗಿತ್. ಮಲ್‌ಗಿದ್ ಅ ಷ್ಟೆ , ಅಷ್ಟ್ ಬೇಗ ಶಿವಪ್ಪಂಗೆ ಒಳ್ಳೆ ನಿದ್ರೆ ಹತ್ತಿ ಗೊರ್ಕೆ ಹೊಡಿತಾ ಉಟ್ಟು. ಅಷ್ಟು ಹೊತ್ತಿಗೆ ರವಿಗೆ ಹೊಟ್ಟೆ ಬೇನೆ ಆಕೆ ಸುರುಆತ್. ರವಿ ನಿದ್ರೆ ಕೂಡ ಮಾಡದೆ ಅಯ್ಯೋ ಹೊಟ್ಟೆ ಬೇನೆ ಅಯ್ಯೋ ಅಂತ ಬೊಬ್ಬೆ ಹಾಕಿತ್. ಆಗ ಶಿವಪ್ಪ ನಿದ್ರೆ ಮಸ್ತ್‌ಲಿ ಎಂಥನೆ ರವಿನಿಂದ್ ಯಾಗೋಳ್ ರಾಮಾಯಣ ಸುಮ್ಮನೆ ಬಿದ್ಕ ಅಂತ ಜೋರ್ ಮಾಡ್ತ್. ರವಿ ಪಾಪ ಹೊಟ್ಟೆ ಬೇನೆ ತಡಿಯಕೆ ಆಗದೆ ಅಯ್ಯೋ ಹೊಟ್ಟೆಬೇನೆ ಅಯ್ಯೋ ಅಂತ ಬೊಬ್ಬೆ ಹಾಕ್ತ್. ಆಗ ಶಿವಪ್ಪ ಇಂವ ನಿನ್ನೆ ದಾರಿಲಿ ಬೀಳ್‌ಕಾಕನ ಎಂಥದೋ ಸೋಂಕಿತು. ನಾನ್ ಮಂತ್ರವಾದಿನ ಕರ್‌ಕ್ಕಂಡ್ ಬನ್ನೆಂತೇಳಿ ಹೊರಟ್ ಹೋತ್. ಹೀಂಗೆ ದಾರಿಲಿ ಹೋಕನ ಶಿವಮಕ್ಕ ಸಿಕ್ಕಿತ್. ಅಣ್ಣ ನೀವ್ ದೂರ ಹೊರಟ್‌ದ್ ಅಂತ ಕೇಳ್ತ್. ಆಗ ನಮ್ಮ ರವಿ ನಿನ್ನೆ ದಾರಿಲಿ ಬಾಕಾಕನ ಒಂದು ಕಲ್ಲ್ ಎಡ್‌ಗಿ ಬಿದ್ದ್ ಈಗ ಹೊಟ್ಟೆಬೇನೆ ಹೊಟ್ಟೆ ಬೇನೆ ಅಂತ ಹೇಳ್ದೆ. ಅದಕ್ಕೆ ನಾನ್ ಮಂತ್ರವಾದಿನ ಕರ್ಕಂಡ್ ಬಾಕೆ ಹೊರ್ಟದ್ ಅಂತ ಹೇಳ್ತ್. ಆಗ ಶಿವಮಕ್ಕ ಮಂತ್ರವಾದಿನ ಕರ್ಕಂಡ್ ಬಂದರೆ ನಿಮ್ಮ ಮಂಜನ ಜೀವ ಉಳ್ಯೆಕಿಲ್ಲೆ ಅದ್ಕೆ ನಾನ್ ಡಾಕ್ಟರ್ ಕರ್ಕಂಡ್ ಬನ್ನೆಂತ ಹೇಳ್ತ್. ಆಗ ಶಿವಪ್ಪ ಡಾಕ್ಟರ್ ಬೇಡ ನಾನ್ ಮಂತ್ರವಾದಿನ ಕರ್ಕಂಡ್ ಬನ್ನೆಂತೇಳಿ ಹೊರಟ್ ಹೋತ್. ಆ ಮಂತ್ರವಾದಿನ ಹೆಸರ್ ಮಂಜಪ್ಪ. ಶಿವಪ್ಪ ಮಂಜಪ್ಪನ ಮನೆಗೆ ಹೋಗಿ ವಿಷಯ ಹೇಳ್ತ್. ಆಗ ಮಂತ್ರವಾದಿ ನಿನ್ನ ಮಂಜ ನಿನ್ನೆ ದಾರಿಲಿ ಬೀಳ್‌ಕಾಕನ ಅವಂಗೆ ಬ್ರಹ್ಮರಕ್ಕಸ ಸೋಂಕಿಟು. ಅದ್ಕೆ ಒಂದು ಬಲಿ ತೆಗ್ಯಾಕು ಅದ್ಕೆ 300 ರೂಪಾಯಿ ಆದೆಂತ ಹೇಳ್ತ್. ಆಗ ಶಿವಪ್ಪ ಎಷ್ಟು ಬೇಕಾರು ಖರ್ಚ್ ಆಗಲಿ ತೊಂದರೆ ಇಲ್ಲೆ. ನನ್ನ ಮಂಜನ ಜೀವ ಉಳ್ಸಿಕೊಡಿ ಅಂತ ಅವನ ಕಾಲ್ ಹಿಡ್ದ್ ಬೇಡಿಕಣ್ತ್. ಮಂಜಪ್ಪ ರವಿನ ಹತ್ರ ಬಂದ್ ಹಾ... ಹಾ. ಬದ್ರಕಾಳಿ ತೇಳಿ ಬಸ್ಮ ಕೊಟ್ಟಿತ್. ಇದರ ಅವನ ತಲೆ ದಿಂಬು ಅಡಿಲಿ ಇಸಿ ಅಂತ ಹೇಳ್ತ್. ರವಿ ಬೇಗ ಹುಷಾರಾದಂತೇಳಿ ಶಿವಪ್ಪ ಬಸ್ಮನ ರವಿನ ತಲೆದಿಂಬು ಅಡಿಲಿ ಇಸಿತ್. ಮಂಜಪ್ಪ ಅವನ ಮನೆಗೆ ಹೋತ್. ಅಷ್ಟೊತ್ತಿಗೆ ಬೆಳಗಾತ್. ರವಿ ಕಣ್ಣು ಮುಚ್ಚಿ ಮಲ್ಗಿಟು. ಆಗ ಕಾರ್‌ರ ಹಾರ್ನ್ ಕೇಳ್ತ್. ಶಿವಮಕ್ಕ ಡಾಕ್ಟರನು ಕರ್ಕಂಡ್ ಬಂದೋ ಕಂಡದೆ ಅಂತ ಹೇಳಿ ಶಿವಪ್ಪ ಬಂದ್ ನೋಡ್ತ್ ಶಿವಮಕ್ಕ ಕಾರಿಂದ ಇಳ್ದ್ ಓ ಶಿವಪಣ್ಣ ಓ ಶಿವಪಣ್ಣ ಅಂತ ಕರ್ದೊ. ಆಗ ಶಿವಪಣ್ಣ ಹೊರಗೆ ಬಂದ್ ರವಿನ ಹೊಟ್ಟೆ ಬೇನೆ ಕಮ್ಮಿ ಆವುಟ್ ಕಂಡದೆ ಅಂವ ನಿದ್ರೆ ಮಾಡಿಟುತ ಹೇಳ್ತ್. ಆಗ ಶಿವಮಕ್ಕ ಡಾಕ್ಟರೊಟ್ಟಿಗೆ ಒಮ್ಮೆ ಪರೀಕ್ಷೆ ಮಾಡಿ ನೋಡಿಂತ ಹೇಳ್ತ್. ಡಾಕ್ಟರ್ ಪರೀಕ್ಷೆ ಮಾಡಿ ನೋಡ್ಕನ ರವಿ ಸತ್ತ್ ಹೋಗಿದ್ದದೆ. ಪಾಪ ಅಂವ ಸಾಯಕಾಕನ ಎಷ್ಟು ಕಷ್ಟ ಬಾತೋ ಎಷ್ಟು ಹೊತ್ತಿಗೆ ಜೀವ ಹೋವುಟೊ ಏನೋ. ಅಂತು ಡಾಕ್ಟರ್ ಬಂದ್ ಅಂವ ಸತ್ತ್ ಹೊವುಟ್‌ಂತ ಹೇಳ್ದೊ. ಆಗ ಶಿವಪ್ಪನ ಗೋಳು ಯಾರಿಗೆ ಹೇಳ್ದು. ಜೋರಾಗಿ ಬೊಬ್ಬೆ ಹಾಕಿ ನನ್ನ ಮೂಡನಂಬಿಕೆಯಿಂದಾಗಿ ನಾನೆ ನನ್ನ ಮಜನ ಕೊಂದೆತ ಹೇಳಿಕಂಡ್ ಅಯ್ಯೋ ದೇವರೇ ರವಿ ನನ್ನ ಬುಟ್ಟು ಹೋದ ಅಯ್ಯೋ ಅಂತ ಬೊಬ್ಬೆ ಹಾಕಿದೆ. ಹಿಂಗೆ ಮೂಡನಂಬಿಕೆಯಿಂದಾಗಿ ನಮ್ಮ ಪ್ರಾಣನೆ ಕಳಕೊಂಡವೆ.

- ಡಿ. ಜೆ. ವನಜಾಕ್ಷಿ (ಗೀತ),ಸುಳ್ಯ

---

# ಪತ್ರಿಕೆ ವಿಭಾಗ

**ಸಂಪಾದಕಿಯವರಿಗೆ:**

ಪಳಮೆ: ರಾಂಪಣ್ಣ V/sಸೋಂಪಣ್ಣನವ ಬಸ್ಸಿನ ಪ್ರಯಾಣ ಸಮಯದ ಸಂಭಾಷಣೆ ಬಗ್ಗೆ ಈ ಕೆಳಗಿನ ತಿದ್ದುಪಡಿಯನ್ನು ತಿಳಿಯಬಯಸುವೆನು.

"ತಣ್ಣೆಮಾನಿ" ಗ್ರಾಮವು ಭಾಗಮಂಡ್ಲದ ಗೌಡ ಕಲ್ಯಾಣ ಮಂಟಪದ ಬದಿಗಾಗಿ ಕರಿಕೆಗೆ ಹೋಗುವ ಮಾರ್ಗದಲ್ಲಿ ಸಿಗುವ ಗ್ರಾಮ. ನಂಗಾರು ಮನೆ ಇರುವುದು. ಭಾಗಮಂಡ್ಲದಿಂದ "ನಾಲ್ಕು ನಾಡು" ರಸ್ತೆ, ಅಂದರೆ ನಾಪೋಕ್ಲು ಕಡೆ ಹೋಗುವ ಮಾರ್ಗದಲ್ಲಿ. ಕಾವೇರಿ ಹೊಳೆ ಸೇತುವೆ ದಾಟಿದ ಹಾಗೆ ಸಿಗುವ ಕೋರಂಗಾಲ ಗ್ರಾಮದಲ್ಲಿರುವುದು. "ಕುಯ್ಯಂಬುಡಿ" (ಬಹುಷ ಕುಯ್ಯಮುಡಿ ಮನೆಯಾಗಿರಬೇಕು) ಇರುವುದು ಇದೇ ಮಾರ್ಗದಲ್ಲಿ. ಮುಂದೆಗೆ ಕೋರಂಗಾಲ ದಾಟಿದ ಹಾಗೆ ಸಿಗುವ ಸಣ್ಣ ಪುಲಿಕೋಟು ಗ್ರಾಮದಲ್ಲಿ ಕೋರಂಗಾಲ ಮತ್ತು ಸಣ್ಣಪುಲಿಕೋಟು ಇವೆರಡೂ ಗ್ರಾಮದ ಬೆಂಗಳೂರು ಪ್ರಯಾಣಿಕರು ಸಾಧಾರಣವಾಗಿ ಬೆಳಿಗ್ಗೆ 7 ಘಂಟೆಗೆ ಭಾಗಮಂಡ್ಲದಿಂದ ಹೊರಟು ನಾಪೋಕ್ಲು ವಿರಾಜಪೇಟೆ ಮೈಸೂರು ಮಾರ್ಗವಾಗಿ "Vಕೋಟೆ"ಯ "ಕೋಲಾರಿಗೆ" ಹೋಗುವ ಬಸ್ಸನ್ನು ಹಿಡಿಯುವರು. ಈ ಬಸ್ಸುಗಳು, ಸಂಗಮ ಸೇತುವೆ ದಾಟಿ ಜೇನು ಸೊಸೈಟಿ ಮುಂದೆ ಮಡಿಕೇರಿ ಮಾರ್ಗ ಹಿಡಿಯುವುದಿಲ್ಲ. ಅಲ್ಲದೆ ಮೇಲೆ ಹೇಳಿದ

ಎರಡೂ ಗ್ರಾಮದ ಪ್ರಯಾಣಿಕರು ಭಾಗಮಂಡ್ಲಕ್ಕೆ ಬಂದು ಬೆಂಗಳೂರಿಗೆ ಬಸ್ಸು ಹಿಡಿಯುವ ಅವಶ್ಯಕತೆ ಇಲ್ಲ.

ಶ್ರೀ ಸಂಕರನ ಬಸಪ್ಪನವರ ಅರೆಗನ್ನಡದ ರಾಜಮಜ್ಞನ ಕಥೆ, ನನ್ನಂತೆ ಕೊ. ಸಂ. ಓದುಗರೆಲ್ಲಾ ಓದಿ ಆನಂದಿಸಿರಬಹುದೆಂದು ಭಾವಿಸುತ್ತೇನೆ. ಇದು ಅದೇ ರೀತಿಯ ಬರವಣಿಗೆಯಾಗಲೆಂದು ಪ್ರಾರ್ಥಿಸುವೆನು. ನಾನು ತೋರಿಸಿದ ತಪ್ಪಿಗೆ ಬಸಪ್ಪನವರು ಏನು ಬೇಸರಿಸುವುದು ಬೇಡ.

- ನಂಗಾರು ಅಪ್ಪಾಜಿ.

ವಿ. ಸೂ.: ಇದು ಸುಮಾರು 1960 ವಿಚಾರವಾಗಿದೆ. ಈಗ ಬದಲಾಗಿದೆ, ನಿಜ, - ಸಂಪಾದಕಿ.

---

## ಇಗ್ಗುತಪ್ಪ

**ದಾಟಿ: ಚೆಲ್ಲಿದರು ಮಲ್ಲಿಗೆಯಾ**

ಇಗ್ಗುತಪ್ಪ ದೇವನೇ... ಭೂಮಿಯ ಒಡೆಯನೆ
ಬೆಟ್ಟಾದ ಮೇಲ್ಗಡೇ.... ಚಂದಾದ ಗುಡಿ ನಿನಗೆ
ಹುತ್ತರಿ ಹಬ್ಬವು ಬಂದಿತು ಈ ದಿನ
ಮೊದಲ ತೆನೆ ನಿನಗೆ ಅರ್ಪಣೇ

||ಇಗ್ಗುತಪ್ಪ||

ಮಲಯಾಳ ದೇಶದಲಿ.... ಹುಟ್ಟಿದ ದೇವರಂತೆ
ತಮ್ಮಂದಿರು ತಂಗಿಯೊಡನೆ ನೆಲೆಸಿಲ್ಲಿ ನಿಂತರಂತೆ
ಕೊಡಗಿನ ಜನ ನಿಮಗೆ ವರುಷವೂ ಹರುಷದಿ
ಜಾತ್ರೆಯ ಮಾಡುವರು

||ಇಗ್ಗುತಪ್ಪ||

ಕೇರಳ ಪ್ರಾಂತ್ಯದಾ ಓಣಂನ ಹಬ್ಬ ದಿನ
ಮಾಗಿದ ತೆನೆಯೊಂದಾ... ಹಕ್ಕಿಯೂ ತಂದಿತು.
ತಂದ್ದಿದ ಕದಿರನ್ನು ತಾ ಅರ್ಪಿಸಿ ಸಂತಸದಿ
ಅಂಗಳದಿ ಕುಣಿದಾಡಿತು.

||ಇಗ್ಗುತಪ್ಪ||

ಕಷ್ಟ, ನಷ್ಟ, ಬಂದಾಗ ಹರಿಕೆಯ ಹೊರುವರು
ನಿನ್ನಾ ಸನ್ನಿಧಿಗೆ ಬಂದು ಬೇಡುವರು
ಹೊತ್ತಿದ್ದ ಹರಿಕೆಯ ಸಾಮಗ್ರಿ ಜೊತೆಯಲ್ಲಿ
ತುಲಾಭಾರ ಮಾಡುವರು

||ಇಗ್ಗುತಪ್ಪ||

ಭಗವತಿ ಭಗಂಡೇಶ್ವರರಾ...ಪ್ರೀತಿಯ ಕುಮಾರನೆ
ಕಷ್ಟವ ಕೊಡದಿರು ಕೈ ಮುಗಿದು ಬೇಡುವೆವು.
ಇಷ್ಟಾವ ಸಲ್ಲಿಸುತ್ತಾ ಕಷ್ಟವಾ ಕಳೆಯುತ್ತಾ
ಕೈ ಹಿಡಿದು ಕಾಪಾಡು ಇಗ್ಗುತಪ್ಪನೆ.

||ಇಗ್ಗುತಪ್ಪ||

- ಬಿಟ್ಟೀರ ಚೋಂದಮ್ಮ ಶಂಭು, ಬೆಂಗಳೂರು

---

## ಗೌಡ ಜನಾಂಗದಲ್ಲಿ ಬದಲಾಗುತ್ತಿರುವ ಮಹಿಳೆ ಮತ್ತು ಅವಳ ಸಮಸ್ಯೆಗಳು

ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆಗೆ ಪೂಜ್ಯ ಸ್ಥಾನವಿದೆ. ನಮ್ಮ ಪುರಾಣದಲ್ಲಿ ಹೆಣ್ಣನ್ನು ಶಕ್ತಿರೂಪಿಣಿ ಎಂದು ಭಾವಿಸಲಾಗಿತ್ತು. ವೇದಗಳ ಕಾಲದಲ್ಲಿ ಉನ್ನತ ಸ್ಥಾನವಿತ್ತು. ಪ್ರಾಚೀನ ಕನ್ನಡ ಸಾಹಿತ್ಯವು ಹೆಣ್ಣನ್ನು ಸಾತ್ವಿಕ ರೀತಿಯಲ್ಲಿ ಉಲ್ಲೇಖಿಸಿದೆ. ಆದರೆ ಆಧುನಿಕ ಸಾಹಿತ್ಯದಲ್ಲಿ ಹೆಣ್ಣಿನ ಪಾತ್ರ ಕೌಟುಂಬಿಕ ಮಟ್ಟಕ್ಕೆ ಸೀಮಿತಗೊಳ್ಳುವಂತಾಯಿತು. ಭಾರತೀಯ ರಾಜಕೀಯದಲ್ಲಿ ಅವಳು ಸಮಾನತೆಯನ್ನು ಪಡೆಯುವಂಥಾಯಿತು.

ಪಿತೃಪ್ರಧಾನ ಸಮಾಜವಾದ ಗೌಡ ಜನಾಂಗದಲ್ಲಿ ಬಹುಷಃ ಮಹಿಳೆಯರು ಪುರುಷನಿಗೆ ಪೂರಕವಾಗಿ ಕುಟುಂಬ ವ್ಯವಸ್ಥೆಯಲ್ಲಿ ದುಡಿಯುತ್ತಿದ್ದರೆ ವಿನಃ ಮಹಿಳೆಯರಿಗೆ ಅವರದೆ ಆದ ಸ್ವಂತಿಕೆ ಮತ್ತು ಗುರುತಿಸುವಿಕೆ ಇದ್ದದ್ದು ಕಡಿಮೆ. ವ್ಯವಸಾಯವನ್ನೇ ಮುಖ್ಯ ವೃತ್ತಿಯಾಗಿ ಅವಲಂಬಿಸಿರುವ ನಮ್ಮ ಸಮಾಜದಲ್ಲಿ ಹೆಣ್ಣು ಹುಟ್ಟಿನಿಂದ ಇನ್ನೊಬ್ಬನ ಸೊತ್ತಾಗುವ ಪರಕೀಯ ಭಾವನೆಗಳನ್ನು ಒಳಗೂಡಿಸಿ ಬೆಳೆದು ಮದುವೆಯಾಗಿ "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಆಗುತ್ತಿದ್ದಳು. ಗಂಡನ ಮನೆಯಲ್ಲಿ ತನ್ನನ್ನು ಗುರುತಿಸಿಕೊಳ್ಳುವಲ್ಲಿ ಬಹುಶಃ ಬಹಳಷ್ಟು ಹೆಣ್ಣು ಮಕ್ಕಳು ಬಳಲುತ್ತಿದ್ದರು. ಎಲ್ಲ ಭಾರತೀಯ ಸಂಸ್ಕೃತಿಯಲ್ಲಿದ್ದಂತೆ "ನಃ ಸ್ತ್ರೀ ಸ್ವತಂತ್ರ್ಯ ಮರ್ಹತಿ" ಎನ್ನುವ ಮಾತು ನಮ್ಮ ಸಮಾಜದಲ್ಲಿ ಪ್ರಚಲಿತವಾಗಿತ್ತು.

ಆದರೆ ಬದಲಾವಣೆಯ ಗಾಳಿ ಈಗ ಬಲವತ್ತರವಾಗಿ ಬೀಸುತ್ತಿದೆ. ಹೊಸ ಕೈಗಾರಿಕಾ ಕ್ರಾಂತಿ, ವಿಜ್ಞಾನದ ಆವಿಷ್ಕಾರಗಳು ತಾಂತ್ರಿಕತೆಗೆ ನಾಂದಿಯಾಗಿ ಲೋಕದ ಹೊರ ರೂಪವನ್ನೇ ಬದಲಾಯಿಸಿತು. ವಿಜ್ಞಾನ ಮತ್ತು ತಾಂತ್ರೀಕತೆ ನಮ್ಮ ಮಹಿಳೆಯರ ಜೀವನ ಮಟ್ಟದಲ್ಲಿ ಸುಧಾರಣೆ ತಂದಿತ್ತು. ಇಪ್ಪತ್ತೊಂದನೆ ಶತಮಾನಕ್ಕೆ ಕಾಲಿರಿಸುವ ಈ ಸಮಯದಲ್ಲಿ ಗಂಡ, ಮನೆ, ಮಕ್ಕಳು ಮತ್ತು ಒಕ್ಕಲುತನವನ್ನು ಬಿಟ್ಟು ವಿದ್ಯಾಭ್ಯಾಸವನ್ನು ಮತ್ತು ಉದ್ಯೋಗವನ್ನು ಪಡೆಯುವಲ್ಲಿ ನಮ್ಮ ಜನಾಂಗದ ಮಹಿಳೆಯರು ಸ್ವಲ್ಪ ಮಟ್ಟಿಗೆ ಯಶಸ್ವಿಯಾಗಿದ್ದಾರೆ. ಎಪ್ಪತ್ತರ ದಶಕದಲ್ಲಿ ಗೌಡ ಮಹಿಳೆಯರಿಗೆ ಪದವೀಧರರಾಗುವುದು ಕನಸಾಗಿತ್ತು. ಸ್ನಾತಕೋತ್ತರ ಪದವಿ ಕನ್ನಡಿಯೊಳಗಿನ ಗಂಟಾಗಿತ್ತು. ದ. ಕ. ಮತ್ತು ಕೊಡಗು ಜಿಲ್ಲೆಗಳು ಶಿಕ್ಷಣದ ಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ಸಾಧಿಸಿರುವುದರಿಂದ ಮತ್ತು ಆರ್ಥಿಕವಾಗಿ ಬಹಳಷ್ಟು ಮುಂದುವರಿದುದರಿಂದ ಈಗ ಯಾವುದೇ ಕ್ಷೇತ್ರದಲ್ಲಿ ಪರಿಣತಿಯನ್ನು ಗಳಿಸುವುದು ಅಷ್ಟೊಂದು ಕಷ್ಟವಾಗಿ ಉಳಿದಿಲ್ಲ. ಆದರೂ ಸಾಕಷ್ಟು ನಮ್ಮ ಜನಾಂಗದ ಮಹಿಳೆಯರು ಶಿಕ್ಷಣವನ್ನು ಅದರಲ್ಲೂ ಉನ್ನತ ಶಿಕ್ಷಣವನ್ನು ಪಡೆಯಲು ಸಮರ್ಥರಾಗಿಲ್ಲ. ಕೆಲವು ಮಹಿಳೆಯರು ಸ್ಪರ್ಧಾತ್ಮವಾಗಿ ಕಾರ್ಯಾಚರಣೆ ಮಾಡುತ್ತಿದ್ದಾರೆ. ಆದರೂ ಹಳ್ಳಿಗಳಲ್ಲೆ ಆಗಲಿ ಅಥವಾ ಪಟ್ಟಣಗಳಲ್ಲೆ ಆಗಲಿ ಒಂದು ರೀತಿಯ ಪೂರ್ವಗ್ರಹ

ಪೀಡಿತದಿಂದ ಕೂಡಿದ ಸಮಾಜದ ದೃಷ್ಟಿಕೋನವು ಇಂದಿಗೂ ಕಾಡುತ್ತಿದೆ. ಮಹಿಳೆಯರು ವಿವಿಧ ರಂಗದಲ್ಲಿ ದುಡಿಯುತ್ತಿದ್ದರೂ ತಮ್ಮ ವ್ಯಕ್ತಿತ್ವವನ್ನು ಸ್ಥಾಪಿಸುವಲ್ಲಿ ಪುರುಷರಿಗಿಂತ ಹೆಚ್ಚು ಶ್ರಮ ವಹಿಸಬೇಕಾಗಿದೆ.

ರಾಮಾಯಣದ ರಾಮನು ಒಂದೇ ಬಾರಿ ಸೀತೆಯನ್ನು ಅಗ್ನಿ ಪರೀಕ್ಷೆಗೆ ಒಳಪಡಿಸಿದರೆ ಸಾಮಾನ್ಯ ಅಥವಾ ಉದ್ಯೋಗಸ್ಥ ಮಹಿಳೆಯೇ ಆಗಲಿ ಪ್ರತಿಕ್ಷಣವೂ ನಾನಾ ಪರೀಕ್ಷೆಗಳಿಗೆ ಒಳಗಾಗುತ್ತಾ ನೋವನ್ನು ಅನುಭವಿಸುತ್ತಿದ್ದಾಳೆ. ಇಂದಿನ ಸ್ಪರ್ಧಾತ್ಮಕ ಸನ್ನಿವೇಶದಲ್ಲಿ ಮಹಿಳೆ ಎದುರಿಸಬೇಕಾಗಿರುವ ಸವಾಲುಗಳು ಹತ್ತು ಹಲವು. ನಮ್ಮ ಸಮಾಜದಲ್ಲಿ ಉದ್ಯೋಗಸ್ಥ ಮಹಿಳೆ ಎಂದಾಕ್ಷಣ ಅವರು ಸುಂದರವಾದ ಉಡುಪು ಒಡವೆಗಳನ್ನು ತೊಟ್ಟು ಕಛೇರಿಗಳಲ್ಲಿ ಕೆಲಸ ಮಾಡುತ್ತಾ ಇಷ್ಟ ಬಂದಂತೆ ಹಾಯಾದ ಜೀವನ ನಡೆಸುತ್ತಾರೆಂಬ ತಪ್ಪು ಕಲ್ಪನೆ ಅನೇಕರಿಗಿದೆ. ಗೃಹಿಣಿಯರಿಗೆ ಹೊರಗೆ ದುಡಿಯುವವರ ಜೀವನ ಸುಂದರವಾದದ್ದೆಂಬ ಕಲ್ಪನೆ. ಇನ್ನೊಂದೆಡೆ ಮಹಿಳೆಯರು ಮನೆ ಕೆಲಸಗಳನ್ನು ನಿರ್ವಹಿಸಲು ಉದಾಸೀನ ಮಾಡಿ ಕಛೇರಿಗಳಿಗೆ ಹಾಯಾಗಿರಲು ಹೋಗುತ್ತಾರೆಂಬ ಕೆಲವು ಗಂಡಸರ ನಂಬಿಕೆ. ಈ ಆಧುನಿಕ ಯುಗದಲ್ಲಿ ಸಮಸ್ಯೆಗಳನ್ನು ಎದುರಿಸುತ್ತಾ ದಿಟ್ಟತನದಿಂದ ಸಮಾಜದಲ್ಲಿ ಸ್ಪಂದಿಸುವ ಮಹಿಳೆಯರ ಜೀವನ ಸುಂದರವಾದದ್ದಲ್ಲ. ಮುಂಜಾನೆದ್ದು ಮನೆ ಕೆಲಸ, ಮಕ್ಕಳ ಪೋಷಣೆ, ಗಂಡನ ಸಿದ್ಧತೆ ಎಲ್ಲವನ್ನು ಪೂರೈಸಿ ತನ್ನ ಕೆಲಸದೆಡೆಗೆ ಹೋಗಬೇಕು. ಅಂತೆಯೇ ಸಹೋದ್ಯೋಗಿಗಳ ಸಹಕಾರವು ಅಷ್ಟರ ಮಟ್ಟಿಗೆ ಇರುವುದಿಲ್ಲ. ಬಹುಷಃ ಎಲ್ಲರಿಗೂ ಅಡಿಯಾಳಾಗಿರಬೇಕೆಂಬ ಅಪೇಕ್ಷೆ ಕೆಲವು ಪುರುಷರಿಗಿದೆ. ಏನೇ ಆದರೂ ಅಂಜದೆ ಕಾನೂನಿನ ಚೌಕಟ್ಟಿನಲ್ಲಿ ದಕ್ಷತೆಯಿಂದ ಕಾರ್ಯೋನ್ಮುಖರಾಗಿರುವ ಮಹಿಳೆಯರನ್ನು ಕಂಡು ಅಸೂಯೆ ಪಡುವ ಜನರು ಸಾಕಷ್ಟಿದ್ದಾರೆ. ಮತ್ತೆ ಮನೆಗೆ ಹಿಂದುರಿಗಿದಾಗ ಮಕ್ಕಳ ವಿದ್ಯಾಭ್ಯಾಸದ ಕಡೆಗೆ ಹೆಚ್ಚಿನ ಗಮನ ಕೊಡುವುದು ತಾಯಿಯಾದವಳ ಕರ್ತವ್ಯ. ಹೀಗೆ ಇಡೀ ದಿನವೂ ಗಾಣದೆತ್ತಿನಂತೆ ದುಡಿದು ತನ್ನ ಜೀವನದ ಸಾರ್ಥಕತೆಯನ್ನು ಪಡೆಯಬೇಕಾಗಿದೆ. ಅಂತೆಯೇ ಮಹಿಳೆಯನ್ನು ಪ್ರಸೂತಿ ಸಮಯದಲ್ಲಿ ಮಾನವೀಯತೆ ದೃಷ್ಟಿಯಿಂದ ನೋಡುವ ಜನ ಬಹಳ ಕಡಿಮೆ. ಯಾವುದೇ ಸಂದಿಗ್ಧ ಪರಿಸ್ಥಿತಿಯಲ್ಲಿ ತಾಳ್ಮೆ, ವಿವೇಕತನದಿಂದ ಮಹಿಳೆಯರು ಕಾರ್ಯೋನ್ಮುಖರಾಗಬೇಕಾಗಿದೆ. ಇದು ಗೌಡ ಜನಾಂಗದ ಮಹಿಳೆಯರಿಗೆ ಮಾ ತ್ರ ಸೀಮಿತವಾಗಿಲ್ಲ.

ಕೊಟ್ಟ ಹೆಣ್ಣು ಕುಲದಿಂದ ಹೊರಗೆ ಎಂಬ ನುಡಿಯನ್ನು ಮರುಕಳಿಸಿದರೆ, ಈಗಲೂ ನಮ್ಮ ಜನಾಂಗದ ಮಹಿಳೆಯರು ತವರು ಮನೆಯ ಆಶ್ರಯವನ್ನು ಬಯಸುವುದಿಲ್ಲ. ಕಾನೂನಿನ ಚೌಕಟ್ಟಿನಲ್ಲಿ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕುದಾರಳಾದರೂ ಹೆಚ್ಚಿನ ಮನೆಗಳಲ್ಲಿ ಆಸ್ತಿಯನ್ನು ಪಡೆಯಲು ಆಸಮರ್ಥಳಾಗಿರುತ್ತಾಳೆ. ದಾಂಪತ್ಯ ಜೀವನದಲ್ಲಿ ವಿವಾಹ ವಿಚ್ಛೇದನ ಮಾಡಿಕೊಂಡಂಥಹ ಬಹಳಷ್ಟು ಗೌಡ ಮಹಿಳೆಯರಿದ್ದಾರೆ. ಅಂಥವರು ಆಶ್ರಯಕ್ಕಾಗಿ ತವರು ಮನೆಯನ್ನು ಅವಲಂಬಿಸಿ ಯಾತನೆಯಿಂದ ಬೇಯುತ್ತಿದ್ದಾರೆ. ಅವರ ನೋವನ್ನು ಅರಿತು ಅದಕ್ಕೆ ತಕ್ಕ ಪರಿಹಾರವನ್ನು ಹೆತ್ತವರು ಕಲ್ಪಿಸಿಕೊಟ್ಟು, ಕೊಟ್ಟ ಹೆಣ್ಣು ತಮ್ಮವಳೆಂದು ಭಾವಿಸಿದರೆ ಖಂಡಿತವಾಗಿಯೂ ಹೆಣ್ಣು ಸಾರ್ಥಕತೆಯನ್ನು ಪಡೆಯಬಹುದು. ಮಾತ್ರವಲ್ಲ ಗೌಡ ಮಹಿಳೆಯರು ಆರ್ಥಿಕವಾಗಿ ಸ್ವತಂತ್ರ್ಯರಾಗಿರುವುದು ಬಹಳ ಅಗತ್ಯವಾಗಿ ಆಗಬೇಕಿದೆ.

ಸಾಮಾನ್ಯವಾಗಿ ದಾಂಪತ್ಯ ಜೀವನದಲ್ಲಿ ಮಕ್ಕಳಿಲ್ಲದಿದ್ದಾಗ ಹೆಣ್ಣನ್ನೇ ದೂಷಿಸುತ್ತಾರೆ. ಮಿತ ಮಕ್ಕಳನ್ನು ಪಡೆದ ಮೇಲೆ ಹೆಣ್ಣನ್ನೆ ಕುಟುಂಬ ಯೋಜನೆಗೆ ಒಳಪಡಿಸುತ್ತಾರೆ, ಹೊರತು ಗಂಡಸಲು ಮುಂದೆ ಬರುವುದಿಲ್ಲ. ಹೆಣ್ಣು ಮಕ್ಕಳೇ ಹುಟ್ಟಿದಾಗ ಹೆಂಡತಿಯೇ ಕಾರಣವೆಂದು ದೂಷಿಸುವುದು ವಾಡಿಕೆಯಲ್ಲಿದೆ. ಹುಟ್ಟುವ ಮಕ್ಕಳುಗಂಡೆ ಆಗಲಿ ಹೆಣ್ಣೆಆಗಲಿ ಗಂಡಸನ್ನುಅವಲಂಬಿಸಿರುತ್ತದೆಎಂಬುದನ್ನುಗಂಡಸರು ಮರೆಯುವಂತಿರಬಾರದು.ಅಮಿನೋಸೆಂಟಿಸಿಸ್‌ನಿಂದಹೆಣ್ಣು ಭ್ರೂಣಹತ್ಯೆಯಾಗುತ್ತಿದೆ ಎಂಬುದಕ್ಕೆ ಅನೇಕ ನಿರ್ದಶನಗಳಿವೆ. ವೈಯಕ್ತಿಕವಾಗಿ ಮಹಿಳೆಯರು ಈ ಕ್ರಮವನ್ನು ಪ್ರತಿಭಟಿಸದಿದ್ದರೆ ಕಾನೂನು ಪ್ರಯೋಜನವಾಗದು. ಗಂಡು ಹೆಣ್ಣಿನ ಅಸಮತೋಲನ ಉಂಟಾಗಬಹುದು. ವರದಕ್ಷಿಣೆಯ ಶಾಪ ಗೌಡ ಮಹಿಳೆಯರನ್ನು ಪೀಡಿಸುತ್ತಿದೆ. ಮಹಿಳೆಯರು ಬದುಕುವ ಹಕ್ಕನ್ನು ಕಳೆದುಕೊಳ್ಳುತ್ತಿದ್ದಾರೆ. ವಿವಾಹ ವಿಚ್ಛೇದನ ಹೆಚ್ಚುತ್ತಿದೆ. ತಪ್ಪಿತಸ್ಥರಿಗೆ ತಕ್ಕ ಶಿಕ್ಷೆಯಾದರೆ ಈ ಪಿಡುಗು ಖಂಡಿತವಾಗಿಯೂ ನಮ್ಮ ಸಮಾಜದಲ್ಲಿ ಕಾಣಲಾರದು. ಈ ಎಲ್ಲಾ ಸಂದರ್ಭಗಳಲ್ಲೂ ಮಹಿಳೆಯರು ಆತ್ಮಸ್ಥೈರ್ಯವನ್ನು ಕಳೆದುಕೊಳ್ಳಬಾರದು.

ಇನ್ನು ಜಾಹೀರಾತು, ಸಿನೇಮಾಗಳಿಗೆ ಸೇರುತ್ತಿರುವ ಬೀರವಂತಿರಬಾರದು. ಉದಾಹರಣೆಗೆ, ಮೋಟಾರು ವಾಹನಗಳ ಜಾಹೀರಾತುಗಳಲ್ಲಿ ಚಾಲಕ ಕರೆದಾಕ್ಷಣ ಮಹಿಳೆಯೊಬ್ಬಳು ನೆಗೆಯಿಂದ ಅವನೊಂದಿಗೆ ಹೋಗುವಂತಹ ಜಾಹೀರಾತು. ಇದರಿಂದ ಸಾಮಾನ್ಯ ಮಹಿಳೆಯರು ಬೀದಿಯಲ್ಲಿ ನಡೆಯುವುದು ಕೂಡಾ ಕಷ್ಟವಾಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಕೆಲವು ಸಾಂಪ್ರದಾಯಗಳು ಮತ್ತು ಮೂಡನಂಬಿಕೆಗಳು ನಮ್ಮ ಜನಾಂಗ ದ ಸ್ತ್ರೀಯರಲ್ಲಿ ಮುಜುಗರವನ್ನುಂಟುಮಾಡುತ್ತವೆ. ಉದಾಹರಣೆಗಾಗಿ ಕೆಲವೊಂದು ಮನೆಗಳಲ್ಲಿ ಇನ್ನೂ ಬಳಕೆಯಲ್ಲಿರುವ "ಋತುಶಾಂತಿ" ಕಾರ್ಯಕ್ರಮ, ಹೆಣ್ಣು ಮಕ್ಕಳು ವಯಸ್ಸಿಗೆ ಬಂದಾಗ ಅವರಿಗೆ ಸಾಂತ್ವನ ಬೇಕು. ಈ ಕಾರ್ಯಕ್ರಮಗಳು ಅವರಿಗೆ ನಾಚಿಕೆಯನ್ನು ಕೀಳಿರಿಮೆಯನ್ನು ಉಂಟು ಮಾಡುತ್ತದೆ.

ಅಂತೆಯೇ ಮಹಿಳೆಯರು ಮುಟ್ಟಾದಾಗ ಮನೆಯಿಂದ

14ನೇ ಪುಟಕ್ಕೆ

## ಮೂರನೇ ವರ್ಷದ ಹುಟ್ಟು ಹಬ್ಬದ ಶುಭಾಶಯಗಳು



ಕೆ. ಬಿ. ಜಯಶ್ರೀ (ಲಚ್ಚಿ)
ಜನನ : 13-2-1999
(ಕಲ್ಲುಮುಟ್ಲು ಬಸಪ್ಪ ಮತ್ತು ರೂಪನವರ ಪುತ್ರಿ)

ನಿನ್ನ ಬಾಳು ಚಿರಾಯುವಾಗಲೆಂದು ಮೂರನೇ ವರ್ಷದ ನಿನ್ನ ಹುಟ್ಟು ಹಬ್ಬಕ್ಕೆ ಶುಭಾಶಯವನ್ನು ಕೋರುವ

ಅಜ್ಜ ಮತ್ತು ಅಜ್ಜಿ :
ಕಲ್ಲು ಮುಟ್ಲು ರಾಮಪ್ಪ
ಮತ್ತು ಅಮ್ಮವ್ವ, ಕಾಂತೂರುಗ್ರಾಮ

ಚಿಕ್ಕಪ್ಪ, ಆಂಟಿ ಮತ್ತು ತಂಮ :
ಕಲ್ಲು ಮುಟ್ಲು ಸೋಮಯ್ಯ,
ಜಮುನ ಮತ್ತು ನೇಶಿಕ್ ಕಾಂತೂರು ಗ್ರಾಮ.

ಅತ್ತೆ, ಮಾವ ಮತ್ತು ಮಕ್ಕಳು :
ಅಕ್ಕಾರಿ ಸುಬ್ಬಯ್ಯ, ಶೋಭ, ಯತೀನ್
ಮತ್ತು ಲವ್ಯ, ಹಾಕತ್ತೂರು ಗ್ರಾಮ.

ಕುಂಜಿಲನ ರಮೇಶ, ನಳಿನಿ ಮತ್ತು
ಶಿಕ್ಷಿತ್, ಕುಂಬಳದಾಳು ಗ್ರಾಮ.

## ಪ್ರತಿಭಾ ಪುರಸ್ಕಾರ

ಮೈಸೂರಿನ ನಿವಾಸಿ ಶ್ರೀ ನಾಗಾರಾಜ್ ಮತ್ತು ಸರೋಜ ದಂಪತಿಗಳ ಮಗ ಕೆ. ಎನ್. ಹರೀಷ್‌ಕುಮಾರ್‌ನವರು 2000-2001ನೇ ಶೈಕ್ಷಣಿಕ ವರ್ಷದ ಫೈನಲ್ ಬಿ.ಕಾಂನಲ್ಲಿ 7ನೇ ರ್‍ಯಾಂಕ್ ಗಳಿಸಿದ್ದಾರೆ. ಇತ್ತೀಚೆಗೆ ಇವರಿಗೆ ಕುವೆಂಪು ವಿಶ್ವ ವಿದ್ಯಾಲಯದ ಕುಲಪತಿ ಡಾ|| ಚಿದಾನಂದ ಗೌಡರು ಪ್ರತಿಭಾ ಪುರಸ್ಕಾರ ನೀಡಿ ಗೌರವಿಸಿದ್ದಾರೆ. ಇವರು ಮೈಸೂರಿನ ಮಹಾಜನ ಕಾಲೇಜಿನ ವಿದ್ಯಾರ್ಥಿಯಾಗಿದ್ದು, ಕೊಡಗಿನ ಕಕ್ಕಬೆ ಮರಂದೋಡ ಗ್ರಾಮದ ಬಾರಿಕೆ ದಿ|| ಸುಬ್ಬಯ್ಯ ಮತ್ತು ಗಂಗವ್ವ ದಂಪತಿಗಳ ಮೊಮ್ಮಗನಾಗಿರುವರು. ತಂದೆ ಬ್ಯಾಂಕ್ ಉದ್ಯೋಗಿಯಾಗಿದ್ದು ತಾಯಿ ಸರೋಜ ಗೃಹಿಣಿಯಾಗಿ ಮೈಸೂರಿನಲ್ಲಿ ನೆಲಸಿದ್ದಾರೆ.

**ಬಾರಿಕೆ ಮನೋಜ್ ಕುಮಾರ್,**
ವಿರಾಜಪೇಟೆ

ಕೆ. ಕೆ. ಭರತ್



## ಶುಭಾಶಯ

ದಿನಾಂಕ 26-01-2002ರಂದು ರಾಷ್ಟ್ರದ ರಾಜಧಾನಿ ನವದೆಹಲಿಯಲ್ಲಿ ನಡೆದ ಗಣರಾಜ್ಯೋತ್ಸವ ಕಾರ್ಯಕ್ರಮದ ಪಥ ಸಂಚಲನದಲ್ಲಿ ಕೊಡಗಿನ ಫೀಲ್ಡ್ ಮಾರ್ಷಲ್ ಕಾರ್ಯಪ್ಪ, ಕಾಲೇಜಿನ ಎನ್.ಸಿ.ಸಿ. ಅಭ್ಯರ್ಥಿಯಾಗಿ ರಾಷ್ಟ್ರಧ್ವಜ ವಂದನಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಕಾಲೇಜಿಗೂ ಮತ್ತು ಕುಟುಂಬಕ್ಕೂ ಹೆಮ್ಮೆಯನ್ನು ತಂದಿರುವ ನಿನಗೆ ಶುಭಾಶಯಗಳು.

ತಂದೆ : ಕುಂಜಿಲನ ಚಂಗಪ್ಪ ಕೃಷ್ಣಯ್ಯ
ತಾಯಿ : ಕುಂಜಿಲನ ಶಾಂತಮ್ಮ ಕೃಷ್ಣಯ್ಯ
ಮಗ : ಕುಂಜಿಲನ ವಿನೋದ್ ಕುಮಾರ್ ಕೃಷ್ಣಯ್ಯ
ಮಗಳು : ಕುಂಜಿಲನ ವೀಣಾ ಕೃಷ್ಣಯ್ಯ

☎ : 08276 / 74368 (O)
08276 / 74626 (R)
ಕುಶಾಲನಗರ

Reg. No. KA/SK/MYS-88 Registered : 10-01-96 TCI Kar. 09592

# ನಾಲ್ಕನೇ ವರ್ಷದ ಪುಣ್ಯಸ್ಮರಣೆ





ಜನನ : 27-7-1926 ಮರಣ : 10-2-1998

ದಿ|| ನಂಗಾರು ಸೋಮಪ್ಪ ರಾಮಯ್ಯ

ನಿಮ್ಮ ಸವಿನೆನಪುಗಳು, ಪ್ರತಿಬಿಂಬಿಸುತ್ತಿರುವ ಹಿತನುಡಿಗಳು ಪ್ರತಿಧ್ವನಿಸುತ್ತಿರುವ ನಮ್ಮ ಬದುಕಿನಲ್ಲಿ ನಿಮ್ಮ ಅಗಲಿಕೆಯ ಕಟು ಸತ್ಯ ಅರಿವಾದಾಗ ಕಣ್ಣಂಚಿನಲ್ಲಿ ಮಿಂಚಿ ಮರೆಯಾಗುವ ಈ ಕಂಬನಿ ನಿಮ್ಮ ಅಗಲಿಕೆಯ ನೋವ ನಿವಾರಿಸುವುದೇ?

ನಿಮ್ಮ ಆತ್ಮಕ್ಕೆ ಆ ಭಗವಂತನು ಚಿರಶಾಂತಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸುವ,

**ಶ್ರೀಮತಿ ನಂಗಾರು ಮಾಚಮ್ಮ ರಾಮಯ್ಯ**
**ಶ್ರೀಮತಿ / ಶ್ರೀ ನಂಗಾರು ಸೋಮಪ್ಪ ಪೊನ್ನಪ್ಪ**
**ಶ್ರೀಮತಿ / ಶ್ರೀ ನಂಗಾರು ಸೋಮಪ್ಪ ಚಂಗಪ್ಪ**
**ಶ್ರೀಮತಿ ಮೂಲೆ ಮಜ್ಲು ಯಶೋಧ ಚಿಣ್ಣಪ್ಪ**
**ಶ್ರೀಮತಿ ಪಾಣತ್ತಲೆ ವಸಂತಿ ಪಳಂಗಪ್ಪ**

**ಶ್ರೀ ನಂಗಾರು ರಾಮಯ್ಯ ನಾಣಯ್ಯ ಮತ್ತು ಶ್ರೀಮತಿ ಗೀತಾ ನಾಣಯ್ಯ**
**ಶ್ರೀ ನಂಗಾರು ರಾಮಯ್ಯ ಮೋಹನ ಮತ್ತು ಶ್ರೀಮತಿ ಸುಲೋಚನ ಮೋಹನ**
**ಶ್ರೀ ನಂಗಾರು ರಾಮಯ್ಯ ನಿಂಗರಾಜು ಮತ್ತು ಶ್ರೀಮತಿ ಸುಮಿತ ನಿಂಗರಾಜು**

ಮೊಮ್ಮಕ್ಕಳಾದ
**ಆಶಿರ, ಆಶಿತ, ಅಶ್ವಿನ್, ದರ್ಶಿನಿ, ಸವ್ಯ,**
**ಸ್ಫೂರ್ತಿ, ರಮ್ಯ, ಗೀತಾ, ದಿಲೀಪ್,**
**ಯಶ್‌ವಂತ್, ಲಕ್ಷ್ಮಿ, ರಜನಿ, ಗೀತಾ,**
**ಮೋದನ್ ಪ್ರಿಯಾ, ರಂದನ್ ಪ್ರಿಯಾ**

ಆಡಳಿತ ವೃಂದ ಹಾಗೂ ಮುಖ್ಯೋಪಧ್ಯಾಯಿನಿ
ಲಿಟ್ಲ್ ಫ್ಲವರ್ ಇಂಗ್ಲೀಷ್ ಹೈಸ್ಕೂಲ್, 16ನೇ 'ಬಿ' ಮೇನ್,
ಹೆಚ್.ಎ.ಎಲ್., 2ನೇ ಸ್ಟೇಜ್, ಇಂದಿರಾನಗರ, ಬೆಂಗಳೂರು - 560 008

**Kodagu Sangathi** Kannada Fortnightly Edited, Published, Printed & Owned by **Pattada P. Sheelamani, Doddanna Buildings, Hunsur Road, Hinkal Post, Mysore - 570017. ☎ : 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.